ಪ್ರತಿಭಾವಂತ
ಸಂಸದೀಯ ಪಟು
ಪುಸ್ತಕ ಮಾಲಿಕೆ

# ಬಿ.ಎಂ. ಹೊರಕೇರಿ

ಡಾ. ಎಂ.ಎಸ್. ಪಾಟೀಲ

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**B.M. HORAKERI**
Eminent Parlimentarian Series
Written by
**Dr. M.S. Patil**
Reader, Kannada Dept.
Gulbarga University, Gulbarga.
**Published** by
Karnataka Legislature Library Committee
Vidhana Soudha, Bangalore-560001.
Page: 140 + xi Price: 20-00 Rs.
**© Chairman**
Karnataka Legislative Council
**& Speaker**
Karnataka Legislative Assembly
First Edition: 2006 Copies: 2000
**Printed & Designed by**
Government Press, Bangalore.

**ಬಿ.ಎಂ. ಹೊರಕೇರಿ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
ಲೇಖಕರು:
**ಡಾ. ಎಂ.ಎಸ್. ಪಾಟೀಲ**
ಪ್ರವಾಚಕರು ಕನ್ನಡ ವಿಭಾಗ,
ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ
**ಪ್ರಕಾಶನ**
**ಗ್ರಂಥಾಲಯ ಸಮಿತಿ**
**ಕರ್ನಾಟಕ ವಿಧಾನ ಮಂಡಲ**
ವಿಧಾನಸೌಧ, ಬೆಂಗಳೂರು-560 001.
ಪುಟ: 140 + xi ಬೆಲೆ: 20/- ರೂ.
**© ಸಭಾಪತಿಗಳು**
**ಕರ್ನಾಟಕ ವಿಧಾನ ಪರಿಷತ್**
**ಸಭಾಧ್ಯಕ್ಷರು**
ಕರ್ನಾಟಕ ವಿಧಾನ ಸಭೆ
ಮೊದಲ ಮುದ್ರಣ: 2006 ಪ್ರತಿಗಳು: 2,000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2005-2006

**ಅಧ್ಯಕ್ಷರು**
ಸಚ್ಚಿದಾನಂದ ಲ.ಖೋತ
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರಿಂದ)

**ಅಧ್ಯಕ್ಷರು**
ವಿ.ಆರ್. ಸುದರ್ಶನ್
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರವರೆಗೆ)

**ಸದಸ್ಯರು**

ಕೃಷ್ಣ
ಸಭಾಧ್ಯಕ್ಷರು. ಕರ್ನಾಟಕ ವಿಧಾನ ಸಭೆ

ವಿಶ್ವನಾಥ್ ಪಾಟೀಲ್ ಹೆಬ್ಬಾಳ್
ವಿಧಾನಸಭಾ ಸದಸ್ಯರು ಹಾಗೂ
ಉಪ ಸಮಿತಿಯ ಅಧ್ಯಕ್ಷರು

ಜಿ.ಎಸ್. ಗಡ್ಡದೇವರ ಮಠ
ವಿಧಾನಸಭಾ ಸದಸ್ಯರು
ಆರ್. ಧ್ರುವನಾರಾಯಣ್
ವಿಧಾನಸಭಾ ಸದಸ್ಯರು
ಕಳಕಪ್ಪ ಜಿ. ಬಂಡಿ
ವಿಧಾನಸಭಾ ಸದಸ್ಯರು
ಡಾ|| ವೀರಬಸವಂತರೆಡ್ಡಿ ಮುದ್ನಾಳ್
ವಿಧಾನಸಭಾ ಸದಸ್ಯರು
ಡಾ. ಚಂದ್ರಶೇಖರ ಬಿ. ಕಂಬಾರ
ವಿಧಾನ ಪರಿಷತ್ ಸದಸ್ಯರು
ಮುಖ್ಯಮಂತ್ರಿ ಚಂದ್ರು
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಉಮಾಶ್ರೀ
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಶ್ರೀನಾಥ್
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)
ವೈ.ಎ. ನಾರಾಯಣಸ್ವಾಮಿ
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

ಡಿ'ಸೋಜ ರಾಬಿನ್‌ಸನ್ — ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಜಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ |
| ಕೆ. ನೂರ್ ಮಹಮದ್ | ಅಧೀನ ಕಾರ್ಯದರ್ಶಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಜಯಶಂಕರಮೂರ್ತಿ | ಕಾರ್ಯದರ್ಶಿ |
| ವಿ. ಶ್ರೀಶ್ | ಅಪರ ಕಾರ್ಯದರ್ಶಿ |
| ಕೃಷ್ಣೇಗೌಡ | ಸಭಾಪತಿಯವರ ಕಾರ್ಯದರ್ಶಿ |

### ಸಂಪಾದಕರು

**ಎಲ್.ಎನ್. ಮುಕುಂದರಾಜ್**

ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

13 ಫೆಬ್ರುವರಿ 2006

ರಾಷ್ಟ್ರದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ॥ ರಾಮಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ|| ಲಂಕಾ ಸುಂದರಂ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಡಾ. ಎಂ.ಎಸ್. ಪಾಟೀಲ ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಬಿ.ಎಂ. ಹೊರಕೇರಿ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

ಸಚ್ಚಿದಾನಂದ ಲ. ಖೋತ
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಕೃಷ್ಣ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯದ ಸಮಿತಿ ಪ್ರತಿಭಾವಂತ ಸಂಸದೀಯ ಪಟುಗಳ ಪುಸ್ತಕ ಮಾಲಿಕೆಗಾಗಿ ಹಿರಿಯ ಸಮಾಜ ಸೇವಕ **ಶ್ರೀ ಬಿ.ಎಂ.ಹೊರಕೇರಿ** ಅವರನ್ನು ಕುರಿತು ಪುಸ್ತಕ ಬರೆಸಲು ತೀರ್ಮಾನ ಕೈಗೊಂಡು, ಆ ಕೆಲಸವನ್ನು ನನಗೆ ವಹಿಸಿದ್ದು ನಿಜಕ್ಕೂ ಅಭಿಮಾನ ಹಾಗೂ ಸಂತೋಷದ ವಿಷಯ.

ಶ್ರೀ ಬಿ.ಎಂ.ಹೊರಕೇರಿಯವರಂತಹ ಪ್ರಾಮಾಣಿಕ ಮುತ್ಸದ್ಧಿಯ ಕುರಿತು ಯೋಚಿಸುವುದು ಹಾಗೂ ಬರೆಯುವುದು ಸುಲಭದ ಮಾತಲ್ಲ. ಅವರು ನನಗೆ ವ್ಯೆಂಯುಕ್ತಿವಾಗಿ ಪರಿಚಿತರು. 1974ರಲ್ಲಿ ನಾನು ಎಂ.ಎ. ಅಧ್ಯಂಯುನ ಮಾಡುತ್ತಿರುವಾಗಲೇ ನನಗೆ ಆತ್ಮೀಯರು. ಅವರ ಮಗ ಮೃತ್ಯುಂಜಯ ಹೊರಕೇರಿ ಹಾಗೂ ನಾನು ಸಹಪಾಠಿಗಳು. ಅವನನ್ನು ಕಾಣಲು ಬಂದಾಗಲೆಲ್ಲ ಅವರೊಂದಿಗೆ ನಮ್ಮ ಆತ್ಮೀಯ ಸಂಭಾಷಣೆ, ಅವರ ವೇಷಭೂಷಣ, ನಿರ್ಮಲವಾದ ಮಾತು, ಮಾತಿನ ಮಧ್ಯದ ಹಾಸ್ಯ ನನಗೆ ಮುದ ನೀಡುತ್ತಿದ್ದವು.

ಸಂಸದೀಯ ಪಟು ಪುಸ್ತಕ ಮಾಲಿಕೆಯಲ್ಲಿ ಈ ಪುಸ್ತಕ ರಚಿಸುವ ಹೊಣೆ ಹೊರಿಸಿದ ವಿಧಾನ ಪರಿಷತ್ತಿನ ಗೌರವಾನ್ವಿತ ಸಭಾಪತಿಗಳು ಮಾನ್ಯ ಶ್ರೀ ವಿ.ಆರ್.ಸುದರ್ಶನ್ ಅವರಿಗೆ ಮೊದಲ ಕೃತಜ್ಞತೆ ಸಲ್ಲಿಸಬೇಕು. ಉಪಸಮಿತಿಯ ಅಧ್ಯಕ್ಷರಾದ ಮಾನ್ಯ ಶ್ರೀ ವಿಶ್ವನಾಥ ಪಾಟೀಲ ಹೆಬ್ಬಾಳ ಅವರಿಗೂ ಹಿರಿಯರಾದ ಕವಿ ಡಾ.ಚಂದ್ರಶೇಖರ ಕಂಬಾರ, ಯಾದಗಿರಿಯ ಶಾಸಕರಾದ ಶ್ರೀ ವೀರಬಸವಂತರಡ್ಡಿ ಮುದ್ನಾಳರಿಗೆ ಮತ್ತಿತರ ಸಮಿತಿಯ ಎಲ್ಲ ಸನ್ಮಾನ್ಯ ಸದಸ್ಯರಿಗೂ ನಾನು ಋಣಿಯಾಗಿದ್ದೇನೆ.

ಈ ಪುಸ್ತಕ ರಚನೆಗೆ ಉತ್ಸಾಹ ತುಂಬಿದ ನನ್ನ ಆತ್ಮೀಯರಾದ ಎಲ್.ಎನ್.ಮುಕುಂದರಾಜ, ಎನ್.ನರಸಿಂಹಮೂರ್ತಿ ಅವರನ್ನು ನೆನೆಯುವುದು ನನ್ನ ಕರ್ತವ್ಯ. ಬಿ.ಎಂ.ಹೊರಕೇರಿಯವರ ಪುಸ್ತಕ ರಚನೆಗೆ ಬೇಕಾದ ಮಾಹಿತಿ ಹಾಗೂ ಭಾವಚಿತ್ರ ನೀಡಿ ಸಹಕರಿಸಿದ ಡಾ.ಮೃತ್ಯುಂಜಯ ಹೊರಕೇರಿಯವರನ್ನು ತುಂಬು ಹೃದಯದಿಂದ ಸ್ಮರಿಸುತ್ತೇನೆ. ಈ ಕಾರ್ಯದಲ್ಲಿ ನೆರವಾದ ಡಾ.ಕೆ.ರವೀಂದ್ರನಾಥ, ಡಾ.ಗವಿಸಿದ್ಧಪ್ಪ ಪಾಟೀಲ ಹಾಗೂ ಮಲ್ಲೇಶಪ್ಪ ಸಿದ್ರಾಂಪೂರ ಅವರನ್ನು ಮರೆಯುವಂತಿಲ್ಲ.

ಕಾಲಬದ್ಧ ಮಿತಿಯಲ್ಲಿಯೇ ಪುಸ್ತಕ ರಚಿಸುವ ಸಂದರ್ಭದಲ್ಲಿ, ಎಲ್ಲಂದದಲ್ಲಿ ಸಹಕರಿಸಿದ ಗುಲಬರ್ಗಾ ವಿಶ್ವವಿದ್ಯಾಲಯದ ಕುಲಪತಿಗಳಾದ ಪ್ರೊ.ವಿ.ಬಿ.ಕುಟಿನ್ಹೊ ಹಾಗೂ ಕುಲಸಚಿವರಾದ ಶ್ರೀ ಎಸ್.ರಾಜಣ್ಣ ಅವರನ್ನು ನೆನೆಯಲೇಬೇಕು.

**ಡಾ.ಎಂ.ಎಸ್.ಪಾಟೀಲ**
ಪ್ರವಾಚಕರು
ಗುಲಬರ್ಗಾ ವಿಶ್ವವಿದ್ಯಾಲಯ

ದಿನಾಂಕ:10.3.2006
ಗುಲಬರ್ಗಾ

# ಪರಿವಿಡಿ

*ಭಾಗ*-೨

**ಭಾಷಣಗಳು**

*ಭಾಗ-೪*

## ಅನುಬಂಧ

# ಬದುಕು ತೆರೆದಿಟ್ಟ ಪುಸ್ತಕ

ಕರ್ನಾಟಕದ ರಾಜಕೀಯ ಅಭ್ಯಾಸ ಮಾಡುವವರಿಗೆ ಇಪ್ಪತ್ತನೆಯ ಶತಮಾನ ಒಂದು ಪರ್ವಕಾಲ. ಕಾಂಗ್ರೇಸ್ ಪಕ್ಷದಿಂದ ರಾಜಕೀಯ ಧುರೀಣರು ಆಡಳಿತದಲ್ಲಿ ತಮ್ಮ ಹೆಸರನ್ನು ಕುಂದುಬಾರದ ರೀತಿಯುಲ್ಲಿ ಬೆಳೆದು ಬಂದಿರುವುದು ನಿಜಕ್ಕೂ ಅನುಕರಣೀಯುವಾದುದು. ಕ್ರಿಯಾಶೀಲತೆಯಲ್ಲಿ ಹಾಗೂ ಗ್ರಾಮುಮಟ್ಟದಲ್ಲಿ ನಾಯುಕತ್ವದ ಗುಣಗಳನ್ನು ಇನ್ನೊಬ್ಬರು ನೋಡಿಕೊಳ್ಳುವ ರೀತಿಯಲ್ಲಿ ಬೆಳೆದು ಬಂದವರಲ್ಲಿ ಎದ್ದು ಕಾಣುವ ಹೆಸರು ಸನ್ಮಾನ್ಯ ಶ್ರೀ ಬಿ.ಎಂ.ಹೊರಕೇರಿ ಅವರದು. ಗ್ರಾಮ ಮಟ್ಟದ ವಿವಿಧ ನೆಲೆಗಳಲ್ಲಿ ಬೆಳೆದು ಶಾಸಕರಾಗುವವರೆಗೆ ಅವರು ಬೆಳೆದು ಬಂದ ಪರಿ ಆಶ್ಚರ್ಯ ಪಡುವಂತಹದ್ದು. ತಳಮಟ್ಟದ ಜನನಾಯಕರಾಗಿ ಅವರು ತೋರಿದ ಕಾರ್ಯದಕ್ಷತೆ ಅನನ್ಯ.

ತತ್ವಬದ್ದ ಹೋರಾಟಕ್ಕಾಗಿ ಅಹರ್ನಿಶಿ ದುಡಿದವರಿವರು. ಪ್ರಾಮಾಣಿಕತೆ, ದಕ್ಷತೆ, ಜನಪರ ಕಾಳಜಿ ಹಾಗೂ ಕಳಕಳಿ ಇಂತಹ ಆದರ್ಶಗಳನ್ನು ತಮ್ಮ ವ್ಯಕ್ತಿತ್ವದಲ್ಲಿ ಹುದುಗಿಸಿಕೊಂಡು ಬೆಳೆದು ಬಂದವರು ಬಿ.ಎಂ.ಹೊರಕೇರಿ ಅವರು. ಅವರ ಇಡೀ ಬದುಕೇ ತೆರೆದಿಟ್ಟ ಪುಸ್ತಕದಂತೆ ಅಧ್ಯಯನ ಶೀಲ ಅವರದ್ದು.

## ಜನನ-ಬಾಲ್ಯ-ಶಿಕ್ಷಣ-ವೃತ್ತಿ

ಬಾದಾಮಿ ಐತಿಹಾಸಿಕವಾಗಿ ಗಂಡು ಮೆಟ್ಟಿನ ಸ್ಥಳ. ಬಾದಾಮಿ ಎಂದಾಗ ಅಲ್ಲಿನ ಮೇಣ ಬಸದಿ, ಸ್ಮಾರಕ ರೂಪದಲ್ಲಿ ನಮ್ಮ ಗಮನ ಸೆಳೆದರೆ, ಅದರೊಂದಿಗೆ ತಳುಕು ಹಾಕಿಕೊಂಡು ಸ್ಮರಿಸಬಹುದಾದ ಹೆಸರೆಂದರೆ ಹೊರಕೇರಿ ಸಾಹೇಬರದು. ಯಾವ ಸಾಹೇಬಗಿರಿ ಇವರಿಗಿರದಿದ್ದರೂ ಹೊರಕೇರಿ ಅವರು ಇವತ್ತಿಗೂ ಬಾದಾಮಿಯಲ್ಲಿ ಗುರುತಿಸಿಕೊಳ್ಳುವುದು ಸಾಹೇಬರೆಂದೇ! ಢಾಣಕಶಿರೂರ ಒಂದು ಸಣ್ಣ ಗ್ರಾಮ. ಕೃಷಿ ಆ ಗ್ರಾಮದ ಅವಿಭಾಜ್ಯ ಅಂಗ. ಸುಸಂಸ್ಕೃತ ಕೃಷಿ ಕುಟುಂಬದಲ್ಲಿ ಬಿ.ಎಂ.ಹೊರಕೇರಿ

ಯವರು 31.06.1916ರಂದು ಜನಿಸಿದರು. ಮಲಪ್ರಭಾ ಹಾಗೂ ಸಾಸ್ವಿ ಹಳ್ಳಗಳಿಂದ ಅನ್ಯ ಗ್ರಾಮಗಳಿಗೆ ಸಂಪರ್ಕವೂ ಸಾಧ್ಯವಾಗುತ್ತಿರಲಿಲ್ಲ. ಅಂತಹ ಗ್ರಾಮದಲ್ಲಿ ಹುಟ್ಟಿದ ಇವರು, ಜೀವನವನ್ನೇ ಒಂದು ಪಾಠದ ರೂಪದಲ್ಲಿ ಸ್ವೀಕರಿಸಿದರು. ಅಲ್ಲಿ ಪ್ರಾಥಮಿಕ ಶಾಲೆಯು ಇರಲಿಲ್ಲ. ಜಾಲಿಹಾಳದಿಂದ ಮುಲ್ಕಿ ಪರೀಕ್ಷೆ ಪಾಸಾದವರೊಬ್ಬರನ್ನು ಕರೆದುಕೊಂಡು ಬಂದು ಹೊರಕೇರಿಯವರಿಗೆ ಶಿಕ್ಷಣ ಕೊಡಿಸುವ ವ್ಯವಸ್ಥೆ ಮಾಡಿದ್ದರು. ಗ್ರಾಮೀಣ ಖಾಸಗಿ ಅಭ್ಯಾಸ ಕೈಗೊಂಡು ಬೇಲೂರು ಪ್ರಾಥಮಿಕ ಕನ್ನಡ ಶಾಲೆಯಲ್ಲಿ ಪರೀಕ್ಷೆಗೆ ಹಾಜರಾಗುತ್ತಿದ್ದರು. ಇವರ ದೊಡ್ಡಪ್ಪನಾದ ಭೀಮಪ್ಪನವರ ಆದರ್ಶ ಉಳಿದೆಲ್ಲ ಸದಸ್ಯರಿಗೆ ಮಾರ್ಗದರ್ಶಿಯಾಗಿತ್ತು. ಪ್ರತಿಯೊಬ್ಬರೂ ದುಡಿಯುತ್ತಿದ್ದುದ್ದರಿಂದ ಹಾಗೂ ದೊಡ್ಡಪ್ಪನವರ ಮೇಲ್ವಿಚಾರಣೆಯಿಂದ ಢಾಣಕಶಿರೂರಿನ ಹೊರಕೇರಿ ಅವರ ಮನೆತನ ಒಂದು ಮಾದರಿ ಮನೆತನವಾಗಿತ್ತು. ದೊಡ್ಡಪ್ಪನ ಈ ಆದರ್ಶವನ್ನು ಬಹುವಾಗಿ ಮೆಚ್ಚಿಕೊಳ್ಳುತ್ತಿದ್ದ ಬಿ.ಎಂ.ಹೊರಕೇರಿಯವರು ಅವರಿಂದ ಕಲಿತದ್ದು ಬಹಳಷ್ಟು. ಸಮಯ ಪ್ರಜ್ಞೆ ಮತ್ತು ಕರ್ತವ್ಯ ಪ್ರಜ್ಞೆ ದೊಡ್ಡಪ್ಪನಿಂದ ಬಂದ ಬಳುವಳಿಯಾಗಿದ್ದವು ಹೊರಕೇರಿಯವರಿಗೆ.

ತಾಲೂಕಾ ಕೇಂದ್ರವಾದ ರೋಣದಲ್ಲಿ ಮುಲ್ಕಿ ಪರೀಕ್ಷೆ ಪಾಸಾಗಿ ದೂರದ ಬಿಜಾಪುರದ ಪಿ.ಡಿ.ಜೆ. ಹೈಸ್ಕೂಲಿನಲ್ಲಿ ಅಧ್ಯಯನ ಪ್ರಾರಂಭವಾಯಿತು. ಪಿ.ಡಿ.ಜೆ. ಹೈಸ್ಕೂಲು ಬ್ರಾಹ್ಮಣಮಯ. ಅಲ್ಲಿ ಇವರೊಬ್ಬರೆ ಬ್ರಾಹ್ಮಣೇತರ ವಿದ್ಯಾರ್ಥಿ. ಸಂಸ್ಕೃತ ಅಧ್ಯಯನ ಕಷ್ಟಕರವೆನಿಸುತ್ತಿತ್ತು. ಆದರೂ ಅಲ್ಲಿನ ಶಿಕ್ಷಕರ ವಾತ್ಸಲ್ಯದಿಂದ ಇಂಗ್ಲೀಷ ಮತ್ತು ಸಂಸ್ಕೃತದಲ್ಲಿ ಪ್ರಾವೀಣ್ಯತೆಯನ್ನು ಪಡೆದುಕೊಂಡರು. ರೆವೆರೆಂಡ್ ಉತ್ತಂಗಿ ಚೆನ್ನಪ್ಪನವರ ಭಾಷಣದಿಂದ ಹೊರಕೇರಿಯವರು ಪ್ರಭಾವಿತರಾದರು. ಸರ್ವಜ್ಞ ಹೇಗೆ ಉತ್ತಂಗಿ ಚೆನ್ನಪ್ಪವನರ ಆದರ್ಶ ವ್ಯಕ್ತಿಯಾಗಿದ್ದನೋ; ಹಾಗೇ ಹೊರಕೇರಿ ಅವರ ಆದರ್ಶ ವ್ಯಕ್ತಿ ಸರ್ವಜ್ಞ. ಇಡೀ ತಮ್ಮ ಬದುಕಿನುದ್ದಕ್ಕೂ ಸರ್ವಜ್ಞ ಹೊರಕೇರಿ ಅವರ ಕೈಕೋಲಾಗಿ ಉಳಿದದ್ದು ಸ್ಮರಣೀಯ.

ಬಿಜಾಪುರದಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಪೂರೈಸಿಕೊಂಡು ನಂತರ ಅಂದಿನ ಪ್ರಸಿದ್ಧ ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ವಿಜ್ಞಾನ ವಿಷಯವನ್ನು ಪ್ರಧಾನವಾಗಿಟ್ಟುಕೊಂಡು ಪಿ.ಯು.ಸಿ.ಯ ಎರಡು ವರ್ಷದ ಅಧ್ಯಯನವನ್ನು

ಮುಗಿಸಿದರು. ತಾವೊಬ್ಬ ಕೃಷಿ ಪದವೀಧರನಾಗಬೇಕೆಂಬ ದೊಡ್ಡ ಆಸೆ ಹೊರಕೇರಿ ಅವರಲ್ಲಿತ್ತು. ಆದರೆ ದೂರದ ಪುನಾ, ಮುಂಬೈಗಳಿಗೆ ಇವರನ್ನು ಕಳಿಸಲು ಮನೆಯ ಹಿರಿಯರು ಒಪ್ಪಲಿಲ್ಲ. ಹೀಗಾಗಿ ದೇವಿ ಹೊಸೂರಿನಲ್ಲಿ ಕೃಷಿ ತರಬೇತಿ ಪಡೆದು ತೃಪ್ತರಾಗಬೇಕಾಯಿತು. 1941ರಲ್ಲಿ ಕೃಷಿ ಇಲಾಖೆಯಲ್ಲಿ 'ಗ್ರಾಮ ಸಹಾಯಕ'(Rural Assistant) ಎಂದು ನೇಮಕಗೊಂಡು, 1942ರಲ್ಲಿ 'ಫೀಲ್ಡ್‌ಕಾಮಗಾರ್' ಎಂದು 1943ರಲ್ಲಿ 'ಕೃಷಿ ಸಹಾಯಕ'(Agriculture Assistant) ಎಂದು ಬಡ್ತಿ ಹೊಂದಿದರು. ಆ ಸಂದರ್ಭದಲ್ಲಿ ಹೊರಕೇರಿ ಅವರ ಪರಿಶ್ರಮ ಮತ್ತು ಕರ್ತವ್ಯ ಪ್ರಜ್ಞೆಯನ್ನು ಮೆಚ್ಚಿದ ಶ್ರೀ ಹುಲ್ಲತ್ತಿ ಸಾಹೇಬರ ಸಾಮಿಪ್ಯ ಇವರಿಗೆ ದೊರಕಿತು. ಸೇವಾ ಪುಸ್ತಕದಲ್ಲಿ ಹುಲ್ಲತ್ತಿ ಸಾಹೇಬರು ಹೊರಕೇರಿಯುವರನ್ನು ಕುರಿತು 'He is Jem in the Department' ಎಂದು ಬರೆದ ವ್ಯಾಖ್ಯೆ ಅವರ ವ್ಯಕ್ತಿತ್ವದ ಒಂದು ಮುಖವನ್ನು ಪರಿಚಯಿಸುತ್ತದೆ. ಅಂದಿನ ಪ್ರಸಿದ್ಧರಾದ ಶ್ರೀ ರಾವ್‌ಬಹದ್ದೂರ್ ಸಾಹೇಬರು ಹೊರಕೇರಿ ಅವರ ಕತೃತ್ವ ಶಕ್ತಿಯನ್ನು ಗಮನಿಸಿ ಇಲಾಖೆಯ ಮುಖ್ಯ ಕೆಲಸಗಳನ್ನು ಇವರಿಗೆ ನಿಯೋಜಿಸುತ್ತಿದ್ದರು. ಹೊರಕೇರಿ ಅವರದು ಕೃಷಿಕ ಮನೆತನವಾದ್ದರಿಂದ ಅದರಲ್ಲಿ ಅವರಿಗೆ ಆಸಕ್ತಿ ಇದ್ದುದರಿಂದ 1955ರಲ್ಲಿ ಕೆಲಸಕ್ಕೆ ಸ್ವಯಂಪ್ರೇರಣೆಯಿಂದ ರಾಜೀನಾಮೆ ನೀಡಿದರು. ಯಾಕೆಂದರೆ ಅವರಿಗೆ ತಮ್ಮ ನೂರಾರು ಎಕರೆ ಜಮೀನಿನ ಅಭಿವೃದ್ಧಿಪಡಿಸುವ ಅಗತ್ಯವಿತ್ತು. ಮಲಪ್ರಭಾ ನದಿ ನೀರನ್ನು ಬಳಸಿಕೊಂಡು ನೀರಾವರಿ ಮಾಡಿ ಆಧುನಿಕ ಬೇಸಾಯುವನ್ನು ಮಾಡುವುದು ಅವರ ಉದ್ದೇಶವಾಗಿತ್ತು. ಅದಕ್ಕಾಗಿ ಅವರು ಕೆಲಸಕ್ಕೆ ರಾಜೀನಾಮೆ ನೀಡಿದರು. ಇದಕ್ಕೆ ಮನೆಯುವರು ಒಪ್ಪಿದರು. ಜೊತೆಗೆ ಇವರಿಗೆ ಕ್ಯಾಟರ್ ಪಿಲ್ಲರ್ ಡಿ4ಡಿ ಟ್ರ್ಯಾಕ್ಟರ್‌ನ್ನು ಕೊಡಿಸಿದರು. ಟ್ರ್ಯಾಕ್ಟರ್ ಮೂಲಕ ನೇಗಿಲು ಹೊಡೆಯಿಸಿದರು. ಭೂಮಿಗೆ ಫಲವತ್ತತೆಯುನ್ನು ಹೆಚ್ಚಿಸುವಲ್ಲಿ ಯಶಸ್ವಿಯಾದರು. ಇವರ ಕೆಲಸ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು.

ಬಾದಾಮಿ ತಾಲ್ಲೂಕಿನ ಶಿವಯೋಗ ಮಂದಿರದ ಸಂಸ್ಥೆಯ ಜಮೀನು ಕಾಡು ಕಂಠಿ ಕಸಗಳಿಂದ ಕೂಡಿತ್ತು. ಅದನ್ನು ಗಮನಿಸಿದ ಹೊರಕೇರಿಯುವರು ಸ್ವಾಮಿಗಳೊಂದಿಗೆ ಚರ್ಚಿಸಿ, ಟ್ರ್ಯಾಕ್ಟರ್‌ನಿಂದ ಭೂಮಿ ಸಾಗುವಳಿ ಮಾಡುವುದಾಗಿಯೂ ಸಂಪೂರ್ಣ ಭೂಮಿಯನ್ನು ಲಾವಣಿ ರೂಪದಲ್ಲಿ ಕೊಡಬೇಕೆಂದು ಒಪ್ಪಂದ ಮಾಡಿಕೊಂಡರು. ಶಿವಯೋಗ ಮಂದಿರದ

ಜಮೀನನ್ನು ಟ್ರ್ಯಾಕ್ಟರ್ ಮೂಲಕ ನೇಗಿಲು ಹೊಡೆಸಿ ಕಂಟಿಗಳನ್ನು ತೆಗೆದುಹಾಕಿ ಭೂಮಿಯನ್ನು ಹದಗೊಳಿಸಿದರು. ಜೊತೆಗೆ ಶಿವಯೋಗ ಮಂದಿರದಲ್ಲಿಯೇ ವಾಸ್ತವ್ಯ ಹೂಡಿ ಸಂಸ್ಥೆಯ ಅಭಿವೃದ್ಧಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಜಾತ್ರೆಯ ಸಂದರ್ಭದಲ್ಲಿ ಕೃಷಿ ಪ್ರದರ್ಶನ ಏರ್ಪಡಿಸಿ ಸುತ್ತಮುತ್ತಲಿನ ಗ್ರಾಮಸ್ಥರಿಗೆ ಆಧುನಿಕ ಕೃಷಿಯ ಪ್ರಯೋಜನಗಳ ಪರಿಚಯ ಮಾಡಿಕೊಡುವ ಪದ್ಧತಿಯನ್ನು ಪ್ರಾರಂಭಿಸಿದರು. ಜೊತೆಗೆ ಶಿವಯೋಗ ಮಂದಿರದಲ್ಲಿ ಪ್ರೌಢ ಶಾಲೆಯೊಂದನ್ನು ಸ್ಥಾಪಿಸಿದರು. ಅದರ ಸಂಸ್ಥೆಯ ಗೌರವ ಕಾರ್ಯದರ್ಶಿಗಳಾಗಿ ಜೀವಂತವಾಗಿರುವವರೆಗೂ ಕೆಲಸ ಮಾಡಿದರು. ಶಿವಯೋಗ ಮಂದಿರದ ಪಕ್ಕದಲ್ಲಿರುವ ಮಹಾಕೂಟ ಕ್ಷೇತ್ರದ ಚೇರಮನ್ನರಾಗಿಯೂ ಹಲವು ಕಾಲ ಕೆಲಸ ಮಾಡಿ ಅದರ ಅಭಿವೃದ್ಧಿಯಲ್ಲಿ ಮುಖ್ಯ ಪಾತ್ರವಹಿಸಿದರು.

## ಸಾರ್ವಜನಿಕ ಸೇವೆ :

ಹೊರಕೇರಿ ಅವರು ಆಧುನಿಕ ಕೃಷಿಯ ಹರಿಕಾರರಾಗಿ ಆಗಲೇ ತಾಲ್ಲೂಕಿನಾದ್ಯಾಂತ ಹೆಸರು ಗಳಿಸಿದ್ದರು. ಇದೇ ಸಂದರ್ಭದಲ್ಲಿ ಸರಕಾರ 1960ರಲ್ಲಿ ತಾಲೂಕಾ ಅಭಿವೃದ್ಧಿ ಮಂಡಳಿಗಳನ್ನು ಅಸ್ತಿತ್ವಕ್ಕೆ ತಂದಿತು. ಸರಕಾರದ ಯೋಜನೆಗಳನ್ನು ಯಶಸ್ವಿಯಾಗಿ ಜಾರಿಗೆ ತರಲು ಸೂಕ್ತ ಸದಸ್ಯರ ಆಯ್ಕೆ ತಾಲೂಕ ಅಭಿವೃದ್ಧಿ ಮಂಡಳಿಗೆ ಅಗತ್ಯವಾಗಿತ್ತು. ತಾಲ್ಲೂಕಿನ ಹಿರಿಯರು ಇದಕ್ಕಾಗಿ ಹೊರಕೇರಿಯುವರನ್ನು ಸಂಪರ್ಕಿಸಿದರು. ಹೊರಕೇರಿಯುವರು ರಚನಾತ್ಮಕ ಕಾರ್ಯಗಳಿಗೆ ತಾನು ಸದಾ ಬದ್ಧನೆಂದು ಇವರು ಒಪ್ಪಿದರು. ಲಾಯದಗುಂದಿ ಕ್ಷೇತ್ರದಿಂದ ಬಾದಾಮಿ ತಾಲ್ಲೂಕ ಅಭಿವೃದ್ಧಿ ಮಂಡಳಿಗೆ ಸದಸ್ಯರಾಗಿ ಆಯ್ಕೆಯಾದರು. ಸರ್ವಾನುಮತದಿಂದ ಅವರು ಬಾದಾಮಿ ತಾಲೂಕು ಅಭಿವೃದ್ಧಿ ಮಂಡಳಿಯ ಪ್ರಥಮ ಅಧ್ಯಕ್ಷರಾಗಿ ಆಯ್ಕೆಯಾದರು. ಒಟ್ಟು ಹದಿನಾಲ್ಕು ವರ್ಷಗಳ ಕಾಲ ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿ ಸಾಕಷ್ಟು ಕೆಲಸಗಳನ್ನು ಮಾಡಿ ಜನಪ್ರೀತಿಯನ್ನು ಗಳಿಸಿಕೊಂಡರು. ಅಧ್ಯಕ್ಷರಾದ ಮೇಲೆ ಇವರ ಸಾರ್ವಜನಿಕ ಸೇವಾ ಕ್ಷೇತ್ರ ಹೆಚ್ಚು ವಿಸ್ತರಣೆಗೊಂಡಿತು. ಬಾದಾಮಿಯಲ್ಲಿರುವುದು ಅನಿವಾರ್ಯವಾಯಿತು. ಅದಕ್ಕಾಗಿ ಬಾಡಿಗೆ ಮನೆಯೊಂದನ್ನು ಮಾಡಿದರು. ಖಾನಾವಳಿ ಊಟವನ್ನು ನೆಚ್ಚಿಕೊಳ್ಳಬೇಕಾಯಿತು. ಸಾರ್ವಜನಿಕ ಸಂಪರ್ಕ ದಿನದಿಂದ ದಿನಕ್ಕೆ ಹೆಚ್ಚಾಗ

ತೊಡಗಿತು. ರಾಷ್ಟ್ರೀಯ ವಿಸ್ತರಣಾ ಯೋಜನೆ(NES) ಅಡಿಯಲ್ಲಿ ತಾಲೂಕಿನ ಗ್ರಾಮಗಳಿಗೆ ರಸ್ತೆ, ನೀರು, ಶಿಕ್ಷಣ ಒದಗಿಸುವಲ್ಲಿ ಇತರ ಸದಸ್ಯರೊಂದಿಗೆ ಮಹತ್ತರ ಕೆಲಸ ಮಾಡಿದರು. ಇವರ ಕಾಲದಲ್ಲಿ ತಾಲೂಕಾ ಅಭಿವೃದ್ಧಿ ಮಂಡಳಿಯ ಪ್ರತಿಯೊಂದು ಸಭೆಯಲ್ಲಿ ಪ್ರತಿಯೊಂದು ವಿಷಯವನ್ನು ಸರ್ವಾನುಮತದಿಂದ ಅಂಗೀಕೃತ ಮಾಡಿದ್ದಕ್ಕೆ ದಾಖಲೆಗಳಿವೆ.

ಹೊರಕೇರಿ ಅವರ ಜನ ಸಂಪರ್ಕ, ಅಧಿಕಾರಿಗಳ ಸಂಪರ್ಕ ಹೆಚ್ಚುತ್ತಾ ಸಾಗಿತು. ಯಾರನ್ನು ನೋಯಿಸದ, ಯಾರಿಗೂ ಅನ್ಯಾಯ ಮಾಡದ, ಯಾವುದೇ ಸ್ವಾರ್ಥ ಬಯಸದ, ಸದಾ ಜನಪರ ಚಿಂತನೆಯಲ್ಲಿ ತೊಡಗಿರುವ ಹೊರಕೇರಿ ಅವರ ವ್ಯಕ್ತಿತ್ವ ದಿನದಿಂದ ದಿನಕ್ಕೆ ವಿಸ್ತರಿಸಿಕೊಂಡು ಬಂದಿತು. ಜಿಲ್ಲೆಯ ಧುರೀಣರಾದ ಬಿ.ಡಿ.ಜತ್ತಿ, ಎಸ್.ಆರ್.ಕಂಠಿ ಅವರ ಸಾಮಿಪ್ಯ ಸಾಧ್ಯವಾಯಿತು. ತಾಲೂಕಿನ ಧುರೀಣರಾದ ಸುಳ್ಳದ ದೇಸಾಯಿಯವರು, ಜಾಲಿಹಾಳದ ಲಗಳಿ ಸಾಹುಕಾರರು. ಬದಾಮಿಯ ಕೆ.ಎಂ.ಪಟ್ಟಣಶೆಟ್ಟರು, ಕಟಗೇರಿಯ ಮೋಕಾಸಿಯವರು ಮುಂತಾದವರು ಇವರ ಬಳಗದಲ್ಲಿದ್ದ ಮುತ್ಸದ್ದಿಗಳಾಗಿದ್ದರು.

ಬಿ.ಎಂ.ಹೊರಕೇರಿ ಅವರು 60-70ರ ದಶಕದಲ್ಲಿಯೇ ಎಂ.ಎಲ್.ಎ. ಆಗಬೇಕಾಗಿತ್ತು. ಆದರೆ ಇವರು ಎಂದೂ ಯಾವುದೇ ರೀತಿಯ ಲಾಬಿಯನ್ನು ಮಾಡಿದವರಲ್ಲ. ಯಾರಿಗೂ ದೀನರಾಗಿ ಕೇಳಿಕೊಂಡವರಲ್ಲ. ಆದರೆ ಚುನಾವಣೆ ಬರುತ್ತಿದ್ದಂತೆ ಎಂ.ಎಲ್.ಎ.ಸ್ಥಾನಕ್ಕೆ ಇವರ ಹೆಸರು ಬ್ಲಾಕ್ ಮಟ್ಟದಲ್ಲಿ ಶಿಫಾರಸ್ಸಾಗಿ ಜಿಲ್ಲಾ ಮಟ್ಟಕ್ಕೆ ಹೋಗುತ್ತಿತ್ತು. ಜಿಲ್ಲಾ ಮಟ್ಟದಲ್ಲಿ ಇವರ ಹೆಸರು ಮಾಯವಾಗುತ್ತಿತ್ತು. ಇದಕ್ಕೆಂದೂ ಅವರು ಬೇಸರಿಸಿಕೊಂಡಿಲ್ಲ. ಸಾರ್ವಜನಿಕ ಸೇವೆ ಆಕಾಶವನ್ನು ನೋಡಿದಂತೆ. ಅದಕ್ಕೆ ಯಾವುದೇ ಸ್ಥಾನಬೇಕಾಗಿಲ್ಲ ಎಂದೂ ನಂಬಿದವರು. ಹಾಗೇ ಸತತ ಕಾಂಗ್ರೆಸ್ ಅಭ್ಯರ್ಥಿಗೆ ಬೆಂಬಲಿಸುತ್ತಾ ಬಂದವರು. ಇವರ ಖಾಸಗಿ ಕಛೇರಿಯೇ ಕಾಂಗ್ರೇಸ್ ಚುನಾವಣಾ ಕಛೇರಿ ಆಗಿದ್ದುಂಟು. ಹೊರಕೇರಿಯವನ್ನು ಎಲ್ಲಾ ಪಕ್ಷದವರು ಗೌರವಿಸುತ್ತಿದ್ದರು, ಪ್ರೀತಿಸುತ್ತಿದ್ದರು.

ಹೀಗಿರುವಾಗ ಹೊರಕೇರಿ ಅವರಿಗೆ ವಿಧಾನಸಭಾ ಸದಸ್ಯರಾಗುವ ಅವಕಾಶ ಒದಗಿ ಬಂದಿತು. ಗುಳೇದಗುಡ್ಡದ ಮತ ಕ್ಷೇತ್ರದಿಂದ ಆಯ್ಕೆಯಾಗಿದ್ದ ಶ್ರೀ ಜೆ.ಪಿ.ನಂಜಯ್ಯನಮಠ ಅವರು ಅಕಾಲಿಕ ಮರಣ ಹೊಂದಿದರು.

ಉಪ ಚುನಾವಣೆ ಅನಿವಾರ್ಯವಾಗಿತ್ತು. ಸೂಕ್ತ ಅಭ್ಯರ್ಥಿಗಳ ಆಯ್ಕೆ ಪ್ರಕ್ರಿಯೆ ನಡೆದಿತ್ತು. ಹೊರಕೇರಿಯವರು ಸ್ಪರ್ಧಿಯಾಗಿ ಕಾಂಗ್ರೇಸ್‌ಗೆ ಗೆಲ್ಲುವುದು ಅನಿವಾರ್ಯವಾಗಿತ್ತು. ದೇವರಾಜ ಅರಸು ಅವರು ಮುಖ್ಯಮಂತ್ರಿಗಳಾಗಿದ್ದರು. ಕೆ.ಎಚ್.ಪಾಟೀಲರು ಕೆ.ಪಿ.ಸಿ.ಸಿ.ಅಧ್ಯಕ್ಷರಾಗಿದ್ದರು. ಅಭ್ಯರ್ಥಿಯ ಆಯ್ಕೆಯನ್ನು ಕೆ.ಪಿ.ಸಿ.ಸಿ.ಯೇ ಮಾಡಬೇಕೆಂದು ನಿರ್ಧರಿಸಲಾಗಿತ್ತು. ದೇವರಾಜ ಅರಸು ಅವರ ಆಪ್ತರು ಹಾಗೂ ನಂಜನಗೂಡು ಶಾಸಕರಾದ ಕೆ.ಬಿ.ಶಿವಯ್ಯ ಅವರು ಬಿ.ಎಂ.ಹೊರಕೇರಿಯವರಿಗೆ ಪಕ್ಷದ ಟೀಕೆಟ್ ನೀಡಬೇಕೆಂದು ಆಗ್ರಹಪಡಿಸಿ ಅವರಿಗೆ ಗುಳೇದಗುಡ್ಡ ಕ್ಷೇತ್ರದ ಟೀಕೆಟ್ ಕೊಡಿಸಿದರು. ಇದರೊಂದಿಗೆ ಶ್ರೀ ಬಿ.ಟಿ.ಸೋಮಣ್ಣ ಅವರು ಬಿ.ಡಿ.ಎ. ಅಧ್ಯಕ್ಷರಾಗಿದ್ದರು. ಹೊರಕೇರಿಯವರಿಗೆ ಆತ್ಮೀಯರಾಗಿದ್ದರು. ಸ್ಥಳೀಯರ ನೆರವಿಲ್ಲದೇ ಹೊರಕೇರಿಯವರು ರಾಜ್ಯ ಮಟ್ಟದ ಗೆಳೆಯರೊಂದಿಗೆ ಸಂಪರ್ಕವಿದ್ದ ಕಾರಣ ಅವರಿಗೆ ಟಿಕೆಟ್ ಲಭ್ಯವಾಯಿತು. ಕೆ.ಎಚ್.ಪಾಟೀಲರ ಒಡನಾಟ ಅವರಿಗಿತ್ತು. ಹೊರಕೇರಿ ಅವರ ಸಾಮರ್ಥ್ಯ ಬಲ್ಲ ಪಾಟೀಲರು ಅವರಿಗೆ ಕಾಂಗ್ರೇಸ್ ಟಿಕೇಟ್‌ನ್ನು ಕೊಟ್ಟರು. ಎಷ್ಟೋ ಜನ ಆಕಾಂಕ್ಷಿಗಳು ಇದರಿಂದ ಕಸಿವಿಸಿಗೊಂಡರು. ಕೆಲವರು ವಿರುದ್ಧ ಪ್ರಚಾರವನ್ನು ಮಾಡಿದರು. ಪ್ರತಿಸ್ಪರ್ಧಿ ಶ್ರೀ ರಾಚಯ್ಯ ವಸ್ತ್ರದ ಅವರು ದೊಡ್ಡಕುಳ. ಹೊರಕೇರಿಯವರಿಗೆ ತಾಲ್ಲೂಕಿನಾದ್ಯಂತ ಅಭಿಮಾನಿ ಬಳಗವಿತ್ತು. ಅವರ ಹತ್ತಿರ ಹಣವಿರಲಿಲ್ಲ. ಆದಾಗಲೇ ಅವರ ಅವಿಭಕ್ತ ಕುಟುಂಬ ವಿಭಜನೆಗೊಂಡಿತ್ತು. ಆದರೂ ಗೆಳೆಯರ ನೆರವಿನಿಂದ ಕೇವಲ ಹದಿನೆಂಟು ಸಾವಿರ ರೂಪಾಯಿ ಚುನಾವಣೆಗೆ ಖರ್ಚು ಮಾಡಿ ಆರಿಸಿ ಬಂದರು. ಉಳಿದ ಖರ್ಚನ್ನು ಕೆ.ಪಿ.ಸಿ.ಸಿ.ಯೇ ಭರಿಸಿತ್ತು. ಕೆ.ಎಚ್.ಪಾಟೀಲ, ದೇವರಾಜ ಅರಸು, ಎಂ.ವೈ.ಘೋರ್ಪಡೆ, ಆರ್.ಎಂ.ದೇಸಾಯಿ(ಕೆ.ಪಿ.ಸಿ.ಸಿ.ಖಜಾಂಚಿ) ಅವರು ಈ ಚುನಾವಣೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

## ಸಾರ್ವಜನಿಕ ಸೇವಾ ಪ್ರಶಸ್ತಿ :

ಬಿ.ಎಂ.ಹೊರಕೇರಿ ಅವರು ಕೃಷಿಯಲ್ಲಿ ಆಧುನಿಕತೆ ಸಾರ್ವಜನಿಕ ಸೇವೆ ಇದನ್ನು ಗಮನಿಸಿ ಕರ್ನಾಟಕ ಸರಕಾರವು 1962ರಲ್ಲಿ ಸಾರ್ವಜನಿಕ ಸೇವಾ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಅಲ್ಪಕಾಲದಲ್ಲಿಯೇ ಅವರು

ಗೈದ ಸೇವೆಗೆ ಯೋಗ್ಯ ಪುರಸ್ಕಾರವಾಗಿದೆ. ಮಣಿಪಾಲದ ಡಾ. ಟಿ.ಎಂ.ಎ.ಪೈ, ಧಾರವಾಡದ ಡಾ.ರಾ.ಯ.ಧಾರವಾಡಕರ್, ಬೆಳಗಾಂವದ ಡಾ.ಬಿ.ಎಸ್.ಜೀರಿಗೆ ಅವರುಗಳಿಗೂ ಇದೇ ಕಾಲದಲ್ಲಿ ಸಾರ್ವಜನಿಕ ಸೇವಾ ಪ್ರಶಸ್ತಿಯನ್ನು ಅಂದಿನ ಮುಖ್ಯಮಂತ್ರಿಗಳಾದ ಶ್ರೀ ಎಸ್.ಆರ್.ಕಂಠಿಯವರು ನೀಡಿ ಗೌರವಿಸಿದರು.

**ದೇಶ-ವಿದೇಶ ಪ್ರವಾಸ :**

ಹೊರಕೇರಿಯವರು ಆಧುನಿಕ ಕೃಷಿಗೈದು ರಾಜ್ಯ ಮಟ್ಟದಲ್ಲಿ ಹೆಸರು ಮಾಡಿದರು. ಅಖಿಲ ಭಾರತ ಕೃಷಿಕ ಸಮಾಜ ದಿಲ್ಲಿ, ಕರ್ನಾಟಕ ಕೃಷಿಕ ಸಮಾಜ ಬೆಂಗಳೂರು ಇವುಗಳ ಸದಸ್ಯರಾಗಿ ಅವುಗಳು ನಡೆಯಿಸುವ ಅಧಿವೇಶನಗಳಲ್ಲಿ ರೈತರೊಂದಿಗೆ ಪಾಲ್ಗೊಂಡು ಕೃಷಿಕ ಸಮಾಜಗಳ ಗಮನ ಸೆಳೆದಿದ್ದರು. ಹೀಗಾಗಿ 1963ರಲ್ಲಿ ಫಾರ್ಮರ್ಸ್ ಎಕ್ಸ್‌ಚೇಂಜ್ ಪ್ರೋಗ್ರಾಂ ಅನ್ವಯದ ಭಾರತದಿಂದ ಜರ್ಮನಿಗೆ ಪ್ರವಾಸ ಮಾಡುವ ಅವಕಾಶ ಒದಗಿಬಂದಿತು. ಭಾರತದ ಹತ್ತು ಜನರ ನಿಯೋಗದಲ್ಲಿ ಹೊರಕೇರಿಯವರು ಕರ್ನಾಟಕದ ಏಕೈಕ ಪ್ರತಿನಿಧಿಯಾಗಿ ವಿದೇಶ ಪ್ರವಾಸ ಪೂರೈಸಿದರು. ಅದರ ಅನುಭವವನ್ನು ತಮ್ಮ ಕೃಷಿಯಲ್ಲಿ ಅಳವಡಿಸಲು ಪ್ರಯತ್ನಿಸಿದರು.

1978ರಲ್ಲಿ ದೆಹಲಿಯಲ್ಲಿ 40 ರಾಷ್ಟ್ರಗಳು ಭಾಗವಹಿಸಿದ್ದ ಇಂಟರ್‌ನ್ಯಾಷನಲ್ ಎಕ್ಸ್ ಪ್ಲೋಜಿಸೆನ್ಸ್ ರೂರಲ್ ಡೆವಲಪ್‌ಮೆಂಟ್ ಕಮ್ಮಿಟದಲ್ಲಿ ಭಾಗವಹಿಸಿ ನದಿ ದಿಕ್ಕು ಬದಲಾವಣೆ-ಸಾಧನೆ ಕುರಿತು ಪ್ರಬಂಧವನ್ನು ಮಂಡಿಸಿದರು. ಈ ಪ್ರಬಂಧ ತಮ್ಮ ಹೊಳೆಯ ದಂಡೆಯ ಹೊಲದ ಕೊರೆತವನ್ನು ತಡೆಹಿಡಿದ ಸ್ವಯಂ ಅನುಭವವನ್ನು ಒಳಗೊಂಡಿದೆ. ಪ್ರತಿ ವರ್ಷವೂ ಭಾರತ ಕೃಷಿಕ ಸಮಾಜವು ರಾಷ್ಟ್ರಮಟ್ಟದಲ್ಲಿ ವಿವಿಧ ರಾಜ್ಯಗಳಲ್ಲಿ ಒಂದೊಂದು ವರ್ಷ ಮಹಾಧಿವೇಶನ ನಡೆಸುತ್ತದೆ. ಹೊರಕೇರಿ ಅವರು 1998ರವರೆಗೂ ರೈತ ಪ್ರತಿನಿಧಿಗಳನ್ನು ಕರೆದುಕೊಂಡು ಆ ಮಹಾ ಅಧಿವೇಶನದಲ್ಲಿ ಭಾಗವಹಿಸುತ್ತಿದ್ದರು. ರೈತಾಪಿ ವರ್ಗದ ಬಗ್ಗೆ ಅವರಿಗಿದ್ದ ಕಾಳಜಿಯನ್ನು ಇದು ಎತ್ತಿ ತೋರಿಸುತ್ತದೆ.

## ಸಂಘ-ಸಂಸ್ಥೆಗಳ ಸ್ಥಾಪನೆ:

ಬಿ.ಎಂ.ಹೊರಕೇರಿ ಅವರು ಟಿ.ಡಿ.ಬಿ. ಅಧ್ಯಕ್ಷರಾದ ಮೇಲೆ ಬಾದಾಮಿ ತಾಲೂಕಿನ ಜನಪ್ರಿಯ ನಾಯಕರಾದರು. ಇವರು ಆಗಿನ ಕಾಲಕ್ಕೆ ಅಗತ್ಯವಾದ ಸಂಘ-ಸಂಸ್ಥೆಗಳನ್ನು ಸ್ಥಾಪಿಸುವಲ್ಲಿ ಮಹತ್ವದ ಪಾತ್ರವಹಿಸಿದ್ದಾರೆ. ಅವರ ಸ್ವಗ್ರಾಮದಿಂದಲೇ ಸಂಘ-ಸಂಸ್ಥೆಗಳು ಸ್ಥಾಪನೆಗೊಂಡವು. ಅದರ ಸಂಕ್ಷಿಪ್ತ ವಿವರ ಈ ಕೆಳಗಿನಂತಿದೆ.

1. 1959ರಲ್ಲಿ ಹೊರಕೇರಿ ಸಹೋದರರ ಕುಟುಂಬಗಳಿಗೆ ಸೇರಿದ ಜಮೀನಿನ ಅಭಿವೃದ್ಧಿ ಹಾಗೂ ಮಲಪ್ರಭಾ ನದಿಯಿಂದ ಭೂಮಿ ಕೊರೆತವನ್ನು ತಡೆಯಲು ಢಾಣಕಶಿರೂರು ಬೇಸಾಯ ಸಹಕಾರಿ ಸಂಘವನ್ನು ಸ್ಥಾಪಿಸಿದರು. ಆ ಮೂಲಕ ಜಮೀನುಗಳ ರಕ್ಷಣೆಯನ್ನು ಮಾಡಿದರಲ್ಲದೇ ಅದನ್ನು ಅಭಿವೃದ್ಧಿ ಪಡಿಸಿದರು.

2. ಅಭಿವೃದ್ಧಿಪಡಿಸಿದ ಜಮೀನನ್ನು ನೀರಾವರಿಗೊಳಿಸಲು ಢಾಣಕಶಿರೂರು ನೀರಾವರಿ ಸಹಕಾರ ಸಂಘವನ್ನು 1960ರಲ್ಲಿ ಸ್ಥಾಪಿಸಿದರು. ಆ ಮೂಲಕ ಎಲ್ಲರ ಇಡೀ ಜಮೀನನ್ನು ನೀರಾವರಿಗೊಳಪಡಿಸಿ ಕಬ್ಬು ಬೆಳೆದು ಆರ್ಥಿಕ ಆದಾಯವನ್ನು ಹೆಚ್ಚಿಸಿದರು.

3. ಶಿವಯೋಗ ಮಂದಿರ ಸಂಸ್ಥೆಯ ಜಮೀನನ್ನು ಲಾವಣಿ ಮಾಡುವ ಸಂದರ್ಭದಲ್ಲಿ ಶಿವಯೋಗ ಮಂದಿರ ಪ್ರೌಢಶಾಲೆಯನ್ನು ಇತರರೊಂದಿಗೆ ಸ್ಥಾಪಿಸಿ ಅದರ ಗೌರವ ಕಾರ್ಯದರ್ಶಿಗಳಾಗಿ ಹಲವಾರು ವರ್ಷಗಳವರೆಗೆ ಕೆಲಸ ನಿರ್ವಹಿಸಿದರು. ಇಂದು ಆ ಶಾಲೆ ಸುಸಜ್ಜಿತವಾಗಿ ಮುನ್ನಡೆದಿದೆ.

4. ಬೇಲೂರು-ಜಾಲಿಹಾಳ ಭಾಗದ ವಿದ್ಯಾವರ್ಧಕ ಸಂಘ ಸ್ಥಾಪಿಸಿ ಅದರ ಗೌರವ ಕಾರ್ಯದರ್ಶಿಗಳಾಗಿ ಕಾರ್ಯಗೈದು ಸುತ್ತಮುತ್ತಲಿನ ಹಳ್ಳಿಗಳ ವಿದ್ಯಾರ್ಥಿಗಳ ವಿದ್ಯಾರ್ಜನೆಗೆ ಕಾರಣೀಭೂತರಾಗಿದ್ದು ಇಂದು ಆ ಸಂಸ್ಥೆ ಬೃಹತ್ ಆಗಿ ಬೆಳೆದಿದೆ.

5. ಕೇಂದ್ರ ಸರ್ಕಾರದ ಪುನರ್‌ವಸತಿ ಯೋಜನೆಯ ಅಡಿಯಲ್ಲಿ ಬುಡಕಟ್ಟು ಜನಾಂಗವೆನಿಸಿದ ಕುಂಚಿಕೊರವರಿಗೆ ರಾಜ್ಯ ಹಾಗೂ

ಕೇಂದ್ರ ಸರ್ಕಾರದಿಂದ ಅನುದಾನ ಪಡೆದು ಅವರಿಗೆ ಬಾದಾಮಿ ತಾಲ್ಲೂಕಿನ ಬನಶಂಕರಿ ಸಮೀಪ ಶಿವಪುರದಲ್ಲಿ ನವಗ್ರಾಮ ನಿರ್ಮಾಣ ಮಾಡಿ ಜಮೀನು ಕೊಡಿಸಿ ಸ್ವಾವಲಂಬಿಗಳನ್ನಾಗಿಸಲು ಕುಂಚಿಕೊರವರ ಸಹಕಾರ ಸಂಘವನ್ನು ಸ್ಥಾಪಿಸಿದರು.

6. ಕರ್ನಾಟಕ ರಾಜ್ಯಾದ್ಯಂತ ಭೂ ಅಭಿವೃದ್ಧಿ ಬ್ಯಾಂಕ್‌ಗಳು ಸ್ಥಾಪನೆಗೊಳ್ಳುವ ಸಂದರ್ಭದಲ್ಲಿ ಬಾದಾಮಿ ತಾಲ್ಲೂಕಿನ ಭೂ ಅಭಿವೃದ್ಧಿ ಬ್ಯಾಂಕಿನ ಪ್ರವರ್ತಕರಾಗಿ ಅದರ ಮೊದಲ ಅಧ್ಯಕ್ಷರಾಗಿ ಸೇವೆಸಲ್ಲಿಸಿದರು.

7. ಬಾದಾಮಿ ವೀರ ಪುಲಿಕೇಶಿ ವಿದ್ಯಾವರ್ಧಕ ಸಂಘದ ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿ ಸೇವೆ ಸಲ್ಲಿಸಿದರು.

8. ಕರ್ನಾಟಕ ರಾಜ್ಯ ಕೃಷಿ ಸಹಾಯಕರ ಹಾಗೂ ಕ್ಷೇತ್ರ ಸಹಾಯಕರ ನೌಕರರ ಸಂಘದ ಅಧ್ಯಕ್ಷರಾಗಿ ನೌಕರರ ಶ್ರೇಯೋಭಿವೃದ್ಧಿಗಾಗಿ ಮೂವತ್ತು ವರ್ಷಗಳ ಕಾಲ ಶ್ರಮಿಸಿದ್ದಾರೆ.

9. ಬಾದಾಮಿ ತಾಲೂಕು ಕೃಷಿ ಉತ್ಪನ್ನಗಳ ಮಾರಾಟ ಸಹಕಾರಿ ಸಂಘದ ಸ್ಥಾಪಕ ಅಧ್ಯಕ್ಷರಾಗಿ ಸೇವೆಯನ್ನು ಸಲ್ಲಿಸಿದ್ದಾರೆ.

10. ಕರ್ನಾಟಕ ರಾಜ್ಯ ಬೇಸಾಯ ಸಹಕಾರಿ ಸಂಘಗಳ ಸ್ಥಾಪಕ ಅಧ್ಯಕ್ಷರಾಗಿ ಸಹಕಾರಿ ಕ್ಷೇತ್ರದ ಅಭಿವೃದ್ಧಿಗೆ ಶ್ರಮಿಸಿದ್ದಾರೆ.

11. ಬಾದಾಮಿಯಲ್ಲಿ ಚಾಲುಕ್ಯ ಗೃಹ ನಿರ್ಮಾಣ ಸಂಘ ಸ್ಥಾಪಿಸಿ ಅದರ ಮೊದಲ ಅಧ್ಯಕ್ಷರಾಗಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಇಂದು ಆ ಬಡಾವಣೆ ನಗರದ ಹೃದಯ ಭಾಗದಲ್ಲಿದೆ.

12. ಮಲಪ್ರಭಾ–ಮಹಾದಾಯಿ ನದಿ ಜೋಡಣೆ ಹೋರಾಟ ಸಮಿತಿಯ ಅಧ್ಯಕ್ಷರಾಗಿ ಸರಕಾರದ ಜೊತೆಗೆ ಸಾಕಷ್ಟು ಪತ್ರ ವ್ಯವಹಾರಗಳನ್ನು, ಪಾದಯಾತ್ರೆಗಳನ್ನು, ವಿಚಾರ ಸಂಕಿರಣಗಳನ್ನು ಏರ್ಪಡಿಸಿ ಉತ್ತರ ಕರ್ನಾಟಕದ ಗದಗ, ನವಲಗುಂದ, ನರಗುಂದ, ರೋಣ, ಬಾದಾಮಿ, ಹುನಗುಂದ ತಾಲ್ಲೂಕುಗಳಿಗೆ ಕುಡಿಯುವ ನೀರಿನ ಮತ್ತು ನೀರಾವರಿ ಯೋಜನೆಗೆ ಅನುಕೂಲವಾಗುವಂತೆ ಸರಕಾರದೊಂದಿಗೆ ಸತತ ಪತ್ರ ವ್ಯವಹಾರ ಮಾಡುತ್ತಾ ಬಂದಿದ್ದು ಇದು ಅವರ ಕನಸಾಗಿದೆ.

13. ಶಿವಯೋಗ ಮಂದಿರದಲ್ಲಿ ಕಿರುಜಲ ವಿದ್ಯುತ್ ಯೋಜನೆ ಸ್ಥಾಪಿಸಲು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳೊಂದಿಗೆ ಪತ್ರ ವ್ಯವಹಾರ ನಡೆಯಿಸಿ ಅದನ್ನು ಸಹಕಾರಿ ತತ್ವ ಆಧಾರದ ಮೇಲೆ ಪ್ರಾರಂಭಿಸಲು ಪರವಾನಿಗೆ ಪಡೆದುಕೊಂಡಿದ್ದು ಅದು ಕಾರ್ಯಗತವಾಗಬೇಕಾಗಿದೆ.
14. ಢಾಣಕಶಿರೂರ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾಗಿ ಎರಡು ಅವಧಿಗೆ ಸೇವೆ ಸಲ್ಲಿಸಿದ್ದಾರೆ.
15. ಸರಕಾರಿ ದಿನಗೂಲಿ ನೌಕರರ ಬಾದಾಮಿ ತಾಲೂಕ ಘಟಕದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.
16. ಕರ್ನಾಟಕ ಕೃಷಿಕ ಸಮಾಜದ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಸೇವೆಸಲ್ಲಿಸಿದ್ದಾರೆ.

**ಸದಸ್ಯತ್ವ:**

1. ಅಖಿಲ ಭಾರತ ಕೃಷಿಕ ಸಮಾಜ, ನವದೆಹಲಿ
2. ಅಖಿಲ ಭಾರತ ಟೆನೆಜ್ ಕ್ಲಬ್, ನವದೆಹಲಿ
3. ಬಸವ ಸಮಿತಿ, ಬೆಂಗಳೂರು
4. ಕರ್ನಾಟಕ ಕೃಷಿಕ ಸಮಾಜ, ಬೆಂಗಳೂರು
5. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
6. ಆಕಾಶವಾಣಿ ಸಲಹಾ ಸಮಿತಿ, ಧಾರವಾಡ
7. ಕರ್ನಾಟಕ ಸರ್ಕಾರದ ರೇಷ್ಮೆ ಸಹಾಯಕರ ನೇಮಕಾತಿ ಸಮಿತಿ, ಬೆಂಗಳೂರು
8. ಬಿಜಾಪುರ ಜಿಲ್ಲಾ ಬರಗಾಲ ನಿರ್ವಹಣಾ ಸಮಿತಿ, ಬಿಜಾಪುರ
9. ಭಾರತ ಸೇವಾದಳ, ಬಾಗಲಕೋಟ
10. ಕರ್ನಾಟಕ ರಾಜ್ಯ ಸಾಕ್ಷರತಾ ಸಲಹಾ ಸಮಿತಿ, ಬೆಂಗಳೂರು

## ಪ್ರಶಸ್ತಿ–ಸನ್ಮಾನ

1. ಕರ್ನಾಟಕ ರಾಜ್ಯ ಸಾರ್ವಜನಿಕ ಸೇವಾ ಪ್ರಶಸ್ತಿ–1962
2. ನವದೆಹಲಿ ಪ್ರೆಂಡ್ಶಿಫ್ ಫೋರಂ ಪ್ರಶಸ್ತಿ–1998
3. ಅಮೇರಿಕನ್ ಬಯೋಗ್ರಾಫಿಕಲ್ ಸೊಸೈಟಿ–1998
4. ಅಮೃತ ಮಹೋತ್ಸವದ ಅಂಗವಾಗಿ ಪುಣ್ಯಕೋಟಿ ಗ್ರಂಥ ಸಮರ್ಪಣೆ–1992
5. ಬಾದಾಮಿ ತಾಲೂಕಿನ ನಾಗರಿಕರ ಸನ್ಮಾನ–1992
6. 68ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಸತ್ಕಾರ ಬಾಗಲಕೋಟಿ–2000

**ಸಾಹಿತ್ಯ ಕೃತಿಗಳು :**

ಬಿ.ಎಂ.ಹೊರಕೇರಿ ಅವರು ಸರ್ವಜ್ಞನ ತ್ರಿಪದಿಗಳಿಂದಲೇ ಪ್ರೇರಣೆ ಪಡೆದು ತಮ್ಮ ಜೀವನದಲ್ಲಿ ಆತನ ತತ್ತ್ವಗಳನ್ನು ಅಳವಡಿಸಿಕೊಂಡವರು. ಸರ್ವಜ್ಞನನ್ನು ಆಳವಾಗಿ ಬಲ್ಲ ಇವರು ಉತ್ತಂಗಿ ಚೆನ್ನಪ್ಪನವರೊಂದಿಗೆ ಈ ಬಗೆಗೆ ಚರ್ಚಿಸುತ್ತಿದ್ದರು. ಕೇಂದ್ರ ಸರಕಾರದ 20 ಅಂಶಗಳ ಕಾರ್ಯಕ್ರಮಗಳ ಯೋಜನೆಯನ್ನು ಗಮನದಲ್ಲಿಟ್ಟುಕೊಂಡು ಅವುಗಳನ್ನು ಸರ್ವಜ್ಞನ ವಚನಗಳಿಗೆ ಹೋಲಿಸಿ ಸಂಯೋಜಕ ಸರ್ವಜ್ಞ ಎಂಬ ಕೃತಿಯನ್ನು ರಚಿಸಿದ್ದಾರೆ. 1. ಗರತಿ ಗಂಗಮ್ಮನ ಉಡಿಯಾಗ 2. ಹೆಣ್ಣು ಅಬಲೆಯಲ್ಲ ಸಬಲೆ 3. ಸಂಯೋಜಕ ಸರ್ವಜ್ಞ 4. ಲಂಚ ಸ್ವರ್ಗಕ್ಕೆ ದಾರಿ–ಎಂಬ ನಾಲ್ಕು ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳ ಮೂಲಕ ಸಾಮಾಜಿಕ, ಆರ್ಥಿಕ, ಕೃಷಿ ಹಾಗೂ ಸ್ತ್ರೀ ಚಿಂತನೆಗಳನ್ನು ಕುರಿತು ತಮ್ಮದೇ ಆದ ಅನುಭವವನ್ನು ಕಟ್ಟಿಕೊಟ್ಟಿದ್ದಾರೆ.

1. **ಗರತಿ ಗಂಗಮ್ಮನ ಉಡಿಯಾಗ** : ಜಾನಪದ ಕೇಂದ್ರಿತವಾಗಿ ಸಮಾಜಶಾಸ್ತ್ರೀಯ ಅಧ್ಯಯನ ನಡೆಸಿದ 31 ಲೇಖನಗಳು ಇಲ್ಲಿವೆ. ಜಾನಪದ ಸಾಹಿತ್ಯದ ಮುಖ್ಯಭಾಗ 'ಗರತಿ ಸಾಹಿತ್ಯ'ವೆಂಬುದು

ಬಿ.ಎಂ.ಹೊರಕೇರಿಯುವರ ಅಚಲವಾದ ನಂಬಿಕೆ. ಹೀಗಾಗಿ ಹೆಂಗಸರಿಂದ ಸೃಷ್ಟಿಯಾದ ಮತ್ತು ಅಂತರಾರ್ಥವನ್ನು ತಿಳಿಸಿಕೊಡುವ ಪ್ರಯತ್ನವನ್ನು ಮಾಡಿದ್ದಾರೆ. ವಿಶೇಷವಾಗಿ ಸ್ಥಳೀಯ ಚರಿತೆಯನ್ನು ಕಟ್ಟಿಕೊಡುವ ಆಕರವಾಗಿದೆ. ಅಳಿಯ ರಾಮರಾಯನ ಕಾಲದ ವಿಜಯನಗರ ಯುದ್ಧ ವಿಪ್ಲವವನ್ನು ಸೂಚಿಸುವ 'ರಾಮಸತ್ತ ಹಾವಳಿ', ಹೈದ್ರಾಬಾದ್ ನಿಜಾಮನ ಅರಾಜಕತೆಗೆ ನಿದರ್ಶನವಾದ 'ಮೊಗಲಾಯಿ ದರ್ಬಾರ ಆಳಿಕೆ'ಯಂತಹ ಪಡೆನುಡಿಗಳಂತೆ, 'ಡೋಗಿಬರ', 'ಪಡೆಬರ'. 'ರಾಗಿಬರ'ಗಳಂತಹ ಭೀಕರ ಬರಗಾಲಗಳು ನಾಡನ್ನಾವರಿಸಿದ ಕಥೆಯನ್ನು ಸಾರುವ ಐತಿಹಾಸಿಕ ಪ್ರತಿಮೆಗಳಾಗಿರುವುದನ್ನು ಬಿ.ಎಂ.ಹೊರಕೇರಿಯವರು ಸೂಕ್ಷ್ಮವಾಗಿ ನಿರ್ವಚಿಸಿದ್ದಾರೆ.

ಸಾಮೂಹಿಕ ಶಕ್ತಿಯಲ್ಲಿ ರಚನೆ ಹಾಗೂ ಸಾಮೂಹಿಕ ಶಕ್ತಿಯಲ್ಲಿ ಬದಲಾವಣೆಯನ್ನು ಕಾಣುವ ಜಾನಪದದ ಬಹುಮುಖ್ಯ ಗುಣಲಕ್ಷಣಗಳೆಂದು ಅಭಿಪ್ರಾಯಪಡುವ ಹೊರಕೇರಿಯವರು 'ತ್ರಿಪದಿ' ಜನಪದ ಸಾಹಿತ್ಯದ ಆತ್ಮವೆನ್ನುತ್ತಾರೆ. ವಿಶೇಷವಾಗಿ ಬೀಸುವ ಕ್ರಿಯೆಯಲ್ಲಿ ಹುಟ್ಟಿದ ಜಾನಪದ ತ್ರಿಪದಿಗಳನ್ನು 'ಚಕ್ರ ಸಾಹಿತ್ಯ' ಎಂಬ ವಿಶೇಷಣದಿಂದ ಗುರುತಿಸುತ್ತಾರೆ. ಇಲ್ಲಿ ಬೀಸುವ ಕ್ರಿಯೆ ಮತ್ತು ಅದಕ್ಕನ್ವಯಿಸಿ ರಚನೆಗೊಳ್ಳುವ ಹಾಡುಗಳಿಗೆ ಸಂದರ್ಭ (Context) ಮತ್ತು ಪಠ್ಯ (Text)ಗಳ ಸಂಬಂಧವಿರುವುದನ್ನು ಹಾಡುಗಳಿಂದಲೇ ಎತ್ತಿ ತೋರಿಸುವ ಇವರ ಸಂಶೋಧನಾ ಗುಣವನ್ನು ಪ್ರತಿನಿಧಿಸಿದೆ. ಹಾಲುಂಡ ತವರು, ತಾಯಿಲ್ದ ತವರು, ಬಡಿವಾರದ ಅತ್ತೆ, ಗಂಡ ಹೆಂಡಿರ ಜಗಳ ಇತ್ಯಾದಿ ಲೇಖನಗಳು ಜನಪದರನ್ನು ಸಾಂಪ್ರದಾಯಿಕ ನೆಲೆಯಲ್ಲಿ ಅಧ್ಯಯನ ಮಾಡುವುದಕ್ಕಿಂತ ಭಿನ್ನವಾಗಿ ವೈಚಾರಿಕವಾದ ಸಮಾಜಶಾಸ್ತ್ರೀಯ, ಮನೋಶಾಸ್ತ್ರೀಯ ರೀತಿಯಲ್ಲಿ ಪರಿಚಯಿಸಿದ್ದಾರೆ. ಎದುರು-ಬದರು ಸಂಬಂಧಿಯಲ್ಲಿ ಆಶಯವನ್ನು ಅನ್ಯೋನ್ಯ ಮನೆತನಗಳ ಕುಲೀನತೆ, ಮರ್ಯಾದೆ, ಗೌರವ, ಬೀಗತನ ಮಾಡುವ ಆರ್ಥಿಕ ಸ್ಥಿತಿಗತಿಗಳು ದಟ್ಟ ಪರಿಚಯವಿರುವ ಹೊಂದಾಣಿಕೆ ಮನೋಭಾವವೆಂದು ವ್ಯಾಖ್ಯಾನಿಸುತ್ತಾರೆ. ಹೀಗೆ ಇಲ್ಲಿಯ ಲೇಖನಗಳು ಜಾನಪದ ಸಾಹಿತ್ಯದ ವಿವಿಧ ಆಶಯಗಳನ್ನು ಅಭಿವ್ಯಕ್ತಿಸುತ್ತವೆ.

2. **ಹೆಣ್ಣು ಅಬಲೆಯಲ್ಲ ಸಬಲೆ** : ಈ ಕೃತಿಯಲ್ಲಿ 22 ಲೇಖನಗಳಿವೆ. ಇವುಗಳ ಸ್ಥಾಯಿಭಾವ ಸ್ತ್ರೀವಾದಿ ಚಿಂತನೆ, ಮಹಿಳಾ ಬದುಕಿನ ಆದರ್ಶ, ಅತಂತ್ರ ಸ್ಥಿತಿಗಳಿಗೆ ಸಾಮಾಜಿಕ ಕಾರಣಗಳನ್ನು ಹುಡುಕುವ ಬಿ.ಎಂ.ಹೊರಕೇರಿಯವರು, ಪುರುಷ ಪ್ರಧಾನವಾದ ಸಮಾಜದಲ್ಲಿ ಸ್ತ್ರೀಯು ತನ್ನ ಪಾಲಿನ ಕರ್ತವ್ಯಗಳನ್ನು ಸಮರ್ಥವಾಗಿ ಪೂರೈಸುವ ಶಕ್ತಿ ಹೊಂದಿದ್ದಾಳೆಂಬುದನ್ನು ಐತಿಹಾಸಿಕ ಪುರಾವೆಗಳಿಂದ ಸಮರ್ಥಿಸಿಕೊಳ್ಳುತ್ತಾರೆ. ದೇವದಾಸಿ ಪದ್ಧತಿ, ವಿಧವೆ ಜೀವನ, ಕಾನೂನು ಅವಕಾಶಗಳ ವಂಚನೆಯಿಂದ ಆಕೆ ಅನುಭವಿಸುತ್ತಿರುವ ಸಾಮಾಜಿಕ ಸಮಸ್ಯೆಗಳಿಗೆ ಈ ಲೇಖನಗಳಲ್ಲಿ ಭಾಷ್ಯ ಬರೆಯುತ್ತಾರೆ. ಈ ಹೊತ್ತು ಸ್ತ್ರೀವಾದಿ ಚಿಂತನೆಗಳ ದೊಡ್ಡ ದೊಡ್ಡ ವೇದಿಕೆಗಳು, ಮಹಿಳಾ ಅಧ್ಯಯನ ಕೇಂದ್ರಗಳು ಸ್ಥಾಪನೆಯಾಗಿವೆ. ಆದರೆ ಸ್ತ್ರೀ ಶೋಷಣೆಯ ನಿಜವಾದ ಕಾರಣವನ್ನು ಕಂಡುಕೊಳ್ಳುವಲ್ಲಿ ಅವು ವಿಫಲವಾಗಿವೆ. ಆ ವಿಫಲತೆಗೆ ಕಾರಣಗಳು ಏನಿರಬಹುದು ಎಂಬುದನ್ನು ಹೊರಕೇರಿಯವರ ಇಲ್ಲಿಯ ಲೇಖನಗಳು ತಲಸ್ಪರ್ಶಿ ಅಧ್ಯಯನದ ಮೂಲಕ ಪರಿಹಾರ ಸೂಚಿಸುತ್ತವೆ. ವ್ಯಕ್ತಿ–ಕುಟುಂಬ–ಸಮಾಜಗಳ ನೆಲೆಯಲ್ಲಿ ಸ್ತ್ರೀಗೆ ಮಾನ್ಯತೆ ತಂದುಕೊಡುವ ಸ್ತ್ರೀ ಸಂವೇದನೆಗಳ ಯೋಜನೆಗಳನ್ನು ರೂಪಿಸಬೇಕೆಂಬುದರ ಒಟ್ಟು ಆಶಯ ಇಲ್ಲಿದೆ.

3. **ಸಂಯೋಜಕ ಸರ್ವಜ್ಞ** : ಇದು ಬಿ.ಎಂ.ಹೊರಕೇರಿಯವರ ಮಹತ್ವಾಕಾಂಕ್ಷೆಯ ಕೃತಿ. ಇಲ್ಲಿಯವರೆಗೆ ಸರ್ವಜ್ಞನನ್ನು ವಿಡಂಬನಾತ್ಮಕ ಕವಿ; ಜನತೆಯ ಕವಿ; ಸಮಾಜ ಮುಖಿಯೆಂದು ಅಧ್ಯಯನ ಮಾಡಿದ್ದೇವೆ. ಆದರೆ ಬಿ.ಎಂ.ಹೊರಕೇರಿಯವರು ಮೂಲತಃ ಕೃಷಿ ಮೂಲದವರು. ಹೀಗಾಗಿ ಅವರಿಗೆ ಸರ್ವಜ್ಞ ಒಬ್ಬ ಅತ್ಯಾಧುನಿಕ ಕೃಷಿಕ ತಜ್ಞನಾಗಿ ಯೋಜನಾ ಆಯೋಗದ ಸಾಮ್ರಾಟನಾಗಿ ಕಾಣಿಸುತ್ತಾನೆ. ಯಾವುದೇ ಸಾಹಿತ್ಯವನ್ನು ಕಾವ್ಯ ಮೀಮಾಂಸೆಯ ಕಣ್ಣಿನಿಂದ ನೋಡದೆ, ಜೀವನ ಮೀಮಾಂಸೆಯ ದೃಷ್ಟಿಯಿಂದ ನೋಡಬೇಕೆಂಬುದುದಕ್ಕೆ ಬಿ.ಎಂ.ಹೊರಕೇರಿಯವರ ಈ ಕೃತಿ ಉತ್ತಮ ನಿದರ್ಶನವಾಗಿದೆ. ಆಗ ಪ್ರಚಲಿತವಿದ್ದ ಕೇಂದ್ರ ಸರ್ಕಾರದ ಇಪ್ಪತ್ತು ಅಂಶಗಳ ಯೋಜನೆಗನುಗುಣವಾಗಿ ಈ ಕೃತಿ ರಚಿವಾಗಿದೆ.

4. **ಕಲ್ಪಜ್ಞನ ವಚನಗಳು :** ಸತ್ಯ–ಪ್ರಾಮಾಣಿಕತೆ–ಶ್ರಮ– ಇವು ಬಿ.ಎಂ.ಹೊರಕೇರಿಯುವರ ಜೀವನ ಸಿದ್ಧಾಂತಗಳು ಅವರು ಬದುಕಿರುವಾಗಲೇ ಇಂಥ ಆದರ್ಶಗಳಿಗೆ ಮನ್ನಣೆ ಕಡಿಮೆಯಾಗುತ್ತಿತ್ತು. ಇದರಿಂದ ಮನನೊಂದ ಹೊರಕೇರಿಯವರಿಗೆ ತಮ್ಮ ಓದಿನ ಸಾಹಿತ್ಯ ವರ್ತಮಾನದಲ್ಲಿ ಮತ್ತೊಂದು ವಿಚಾರಗಳಿಗೆ ಆಹಾರವಾದವು. ಈ ಹಿನ್ನೆಲೆಯುಲ್ಲಿ ಸರ್ವಜ್ಞನ ಅಂದಿನ ಲೋಕಾನುಭವಗಳನ್ನು ಹೊರಕೇರಿಯುವರು ಅವರ ಕಾಲದ ಭ್ರಷ್ಟತೆಗೆ ಆರೋಪಿಸಿ ಅಣಕ ವಚನಗಳನ್ನು 'ಕಲ್ಪಜ್ಞ' ಅಂಕಿತದಲ್ಲಿ ಕಡೆದು ನಿಲ್ಲಿಸಿದ್ದಾರೆ.

## ಕೌಟುಂಬಿಕ ಜೀವನ :

ಮೂರು ತಲೆಮಾರುಗಳವರೆಗೂ ಅವಿಭಕ್ತವಾಗಿದ್ದ ಹೊರಕೇರಿಯವರ ಮನೆತನ ಸಣ್ಣ ಪುಟ್ಟ ಕಾರಣಗಳಿಗಾಗಿ ಪಾಲಾಗುವ ಪ್ರಸಂಗ ಬಂತು. ಪಾಲಾಗುವಾಗ ಯಾರೂ ಯಾವುದಕ್ಕೂ ಭಿನ್ನಾಭಿಪ್ರಾಯುಗಳನ್ನು ಹೊಂದದೇ ಬೇರೆಯುವರ ಸಹಾಯುವಿಲ್ಲದೇ ಸೋದರಮಾವ ಹನುಮಪ್ಪ ಸಂದಿಗವಾಡ ಇವರು ಹಂಚಿಕೊಟ್ಟಂತೆ ಪಾಲನ್ನು ತೆಗೆದುಕೊಂಡರು. ಹೊರಕೇರಿ ಅವರಿಗೆ ಬಂದುದು ಬರೀ ಮನೆ, ಕರಿ ಹೊಲ. ಒಂದಿಷ್ಟು ಬಂಗಾರ. ಹಣವಂತೂ ಇಲ್ಲವೇ ಇಲ್ಲ. ಇವರು ಪಾಲಾದ ದಿನ ಒಂದಿಷ್ಟು ಹೊತ್ತು ಮನೆಯುಲ್ಲಿದ್ದು ತಮ್ಮ ಸಾರ್ವಜನಿಕ ಕೆಲಸಗಳಿಗೆ ತೆರಳಿಯೇ ಬಿಟ್ಟರು. ಹಿರಿಯ ಮಗ ಧಾರವಾಡದಲ್ಲಿ ಎಂ.ಎ.ಅಧ್ಯಯನ ನಡೆಸಿದ್ದ. ಅವನು ಮನೆತನದ ಜವಾಬ್ದಾರಿ ಹೊರಲು ಬರುವಂತಿರಲಿಲ್ಲ. ಕಿರಿಯ ಮಗ ಶಿವಪ್ಪ ಮತ್ತು ಧರ್ಮಪತ್ನಿ ಶಿವಬಸಮ್ಮ ಇವರು ಪಾಲಾದ ಮನೆತನದ ಜವಾಬ್ದಾರಿಯನ್ನು ವಹಿಸಿಕೊಂಡರು. ಎಪ್ಪತ್ತು ಎಕರೆ ಹೊಲ, ಐದು ಅಂಕಣದ ಮನೆ ಬಾದಾಮಿಯಲ್ಲೊಂದು ಗುಡಾನು ಸಹಿತ ಒಂದು ಮನೆ ಇದಿಷ್ಟು ಹೊರಕೇರಿಯವರ ಪಾಲಿಗೆ ಬಂದ ಚಿರಾಸ್ತಿ.

ತಾಯಿ ಮಕ್ಕಳಿಬ್ಬರೇ ಮನೆತನವನ್ನು ಒಕ್ಕಲುತನವನ್ನು ಅವಲಂಬಿಸಿ ಮುನ್ನೆಡೆಸಿಕೊಂಡು ಬಂದರು. ಸಾಹೇಬರ ಕೊನೆಯ ಮಗಳಾದ ಭೀಮವ್ವನನ್ನು ರೋಣದ ಸಂದಿಗವಾಡದವರ ಮನೆಗೆ ಕೊಟ್ಟದ್ದಾಯಿತು. ಸಂದಿಗವಾಡದವರ ಹೆಣ್ಣು ಮಗಳಾದ ಗಂಗಮ್ಮನನ್ನು ಹಿರಿಯ ಮಗ ಮೃತ್ಯುಂಜಯನಿಗೆ ಕೊಂಡದ್ದಾಯಿತು. ಇವೆರಡೂ ಕಾರ್ಯಗಳು ಅವಿಭಜಿತವಾಗಿದ್ದಾಗಲೇ ಜರುಗಿದ್ದವು. ಹೊರಕೇರಿಯವರಿಗೆ ವಯಸ್ಸಿಗೆ ಬಂದ ಎರಡನೆ ಮಗನ ಮದುವೆ ಮಾಡುವ ಜವಾಬ್ದಾರಿಯಿತ್ತು. ಅದನ್ನು ಸೋದರ ಮಾವನಿಗೆ ವಹಿಸಿ ಮತ್ತೆ ಬಾದಾಮಿ ಸೇರಿಕೊಂಡರು. ಅದಾಗಲೇ ಎಂ.ಎಲ್.ಎ. ಆಗಿದ್ದರು. ರೋಣಾ ತಾಲ್ಲೂಕಿನ ಅಮರಗೋಳ ಗ್ರಾಮದ ಪೋಲಿಸ್ ಪಾಟೀಲ ಶಂಕರಗೌಡರ ಮಗಳಾದ ಶಾಂತವ್ವನನ್ನು ಕಿರಿಯ ಮಗ ಶಿವಪ್ಪನಿಗೆ ತಂದುಕೊಳ್ಳುವ ಜವಾಬ್ದಾರಿಯನ್ನು ಬೇರೆಯವರಿಂದಲೇ ಪೂರೈಸಿದರು. ಇದರರ್ಥ ಹೊರಕೇರಿ ಅವರು ಕೌಟುಂಬಿಕ ವಿಷಯಗಳಲ್ಲಿ ಹೆಚ್ಚಿನ ಜವಾಬ್ದಾರಿ ಹೊರಲಿಲ್ಲ. ಆ ಪ್ರಮೇಯವೂ ಅವರಿಗೆ ಬಂದೊದಗಲಿಲ್ಲ. ಹೀಗಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ಅವರು ಹೆಚ್ಚು ತಮ್ಮನ್ನು ತೊಡಗಿಸಿಕೊಂಡರು. ಹೆಂಡತಿಯಾಗಲಿ, ಮಕ್ಕಳಾಗಲಿ ಇದನ್ನು ಆಕ್ಷೇಪಿಸಲಿಲ್ಲ. ಹೇಗೋ ಮನೆತನವನ್ನು ಮುನ್ನಡೆಸಿಕೊಂಡು ಹೋಗುತ್ತಿದ್ದರು. 1973ರಲ್ಲಿ ಸಾಹೇಬರ ತಾಯಿ ರಂಗಮ್ಮನವರು ವೃದ್ಧಾಪ್ಯದಿಂದಾಗಿ ತೀರಿಕೊಂಡರು. 1990ರಲ್ಲಿ ಧರ್ಮಪತ್ನಿ ಶ್ರೀಮತಿ ಶಿವಬಸಮ್ಮ ಅಸ್ತಮಾದಿಂದಾಗಿ ತೀರಿಕೊಂಡರು.

ಹೊರಕೇರಿಯವರು ನಿರ್ಲಿಪ್ತ ಮನೋಭಾವದವರಾಗಿದ್ದರು. ಎಲ್ಲರನ್ನು ನಂಬುತ್ತಿದ್ದರು. ಒಮ್ಮೆ ನಂಬಿಕೆ ಹುಸಿಯಾದರೆ ಮತ್ತೆ ಅವರೆಂದೂ ಮಾತನಾಡುತ್ತಿರಲಿಲ್ಲ. ಹೀಗಾಗಿ ಬಹಳ ಜನರು ಇವರಿಂದ ಉಪಕೃತರಾಗಿ ವಂಚನೆಗೈದಿದ್ದಾರೆ. ಉದಾಹರಣೆಗೆ ಶಾಸಕರಿಗಾಗಿ ನೀಡಿದ ನಿವೇಶನವನ್ನು ಹೊರಕೇರಿಯವರು ಮಾರುವಾಗ ಮಧ್ಯವರ್ತಿಗಳಿಂದ ಮೋಸಹೋಗಿ ಅಪಾರ ಮೊತ್ತದ ಹಣವನ್ನು ಕಳೆದುಕೊಂಡಿದ್ದಾರೆ. ಹಿರಿಯ ಮಗನೊಂದಿಗೆ 1973ರಿಂದಲೂ ತಾತ್ವಿಕ ಭಿನ್ನಾಭಿಪ್ರಾಯದಿಂದಲೂ ಹೆಚ್ಚಿನ ಸಂಪರ್ಕವನ್ನಿಟ್ಟುಕೊಂಡಿರಲಿಲ್ಲ. ಅದಾಗಲೇ ಹಿರಿಯ ಮಗ ಎಂ.ಎ., ಪಿಎಚ್.ಡಿ ಪದವಿಗಳಿಸಿ ಗುಲಬರ್ಗಾ ವಿಶ್ವವಿದ್ಯಾಲಯದ ಸಂಡೂರು ಸ್ನಾತಕೋತ್ತರ ಕೇಂದ್ರದಲ್ಲಿ ಅಧ್ಯಾಪಕನಾಗಿ ಸ್ವತಂತ್ರ ಜೀವನ ನಡೆಸಿದ್ದ. ಇದೇ ಮಗ 1967ರಲ್ಲಿ ಕಾರಣಾಂತರಗಳಿಂದ ಮನೆಬಿಟ್ಟು ಹೋದಾಗ ಈ

ಕಠೋರ ನಿಲುವಿನ ಅಪ್ಪ ಮಗನಿಗಾಗಿ ಹಂಬಲಿಸಿ ಹತ್ತಾರು ಊರುಗಳಲ್ಲಿ ಹುಡುಕಿದ್ದು ಅವರ ಮಗನ ಮೇಲಿನ ಮಮತೆಯನ್ನು ಎತ್ತಿ ತೋರಿಸುತ್ತದೆ.

1974ರಲ್ಲಿ ದೆಹಲಿಯಲ್ಲಿ ದೂರದರ್ಶನದಲ್ಲಿ ಭಾಗವಹಿಸುವ ಕರೆಯೊಂದು ಕೇಂದ್ರ ಸರ್ಕಾರಿಂದ ಬಂದಿತ್ತು. ಇದಕ್ಕೆ ಅವರು ತಮ್ಮ ಹೆಂಡತಿಯನ್ನು ಕರೆದುಕೊಂಡು ಹೋಗಲು ಅವಕಾಶವಿತ್ತು. ಆದರೆ ಹಳ್ಳಿಯ ಮುಗ್ಧೆಯಾದ ಶಿವಬಸಮ್ಮ ಅವರು ದೆಹಲಿ ಪ್ರವಾಸವನ್ನು ನಿರಾಕರಿಸಿದರು. ಎಂದೂ ಕುಟುಂಬದವರೊಂದಿಗೆ ಕುಳಿತು ಮಾತನಾಡಲಿಲ್ಲ. ಈ ಪರಂಪರೆ ಈಗಲೂ ಅವರ ಮನೆತನದಲ್ಲಿ ಮುಂದುವರೆದಿದೆ. ಇದು ಹಿರಿಯರನ್ನು ಗೌರವಿಸುವ ಪರಂಪರೆ.

ಸಾಹೇಬರದು ಸಾದಾ ಸೀದಾ ಜೀವನವಾಗಿತ್ತು. ಸದಾಕಾಲ ಖಾದಿಯನ್ನೇ ಧರಿಸುತ್ತಿದ್ದರು. ಬಾದಾಮಿಯಲ್ಲಿ ತಮಗಾಗಿ ಎರಡು ರೂಮಿನ ಆಫೀಸೊಂದನ್ನು ಮಾಡಿಕೊಂಡಿದ್ದರು. ಅದರಲ್ಲಿಯೇ ವಾಸವಾಗಿದ್ದರು. ಒಂದಿಬ್ಬರು ವಿದ್ಯಾರ್ಥಿಗಳು ಸದಾ ಆ ರೂಮಿನಲ್ಲಿ ಇರುತ್ತಿದ್ದರು. ಢಾಣಕಶಿರೂರಿನಿಂದ ಬುತ್ತಿ ಬರುತ್ತಿತ್ತು. ಈಚೆಗೆ ಖಾನಾವಳಿ ಊಟವನ್ನು ಬಿಟ್ಟಿದ್ದರು, ಬಂದ ಬುತ್ತಿಯಲ್ಲಿಯೇ ವಿದ್ಯಾರ್ಥಿಗಳೊಂದಿಗೆ ಊಟ ಮಾಡುತ್ತಿದ್ದರು.

ಶಾಸಕರು ಹಾಗೂ ಮಾಜಿ ಸಚಿವರಿಗೆ ಸರಕಾರಿ ಬಸ್ಸಿನಲ್ಲಿ ಸಹಾಯಕರೊಂದಿಗೆ ಪ್ರಯಾಣಿಸಲು ಬಸ್ ಪಾಸ್ ಕೊಡುತ್ತಾರೆ. ಇದರಿಂದಾಗಿ ಹೆಚ್ಚಿನ ಖರ್ಚಿಲ್ಲದೇ ಹೊರಕೇರಿ ಅವರು ಯಾರೇ ಕರೆಯಲಿ ಅವರೊಂದಿಗೆ ತಮ್ಮ ಬಸ್ ಪಾಸ್‌ನಲ್ಲಿಯೇ ಕರೆದುಕೊಂಡು ಹೋಗುತ್ತಿದ್ದರು. ಕೆಲಸವಾಗಲಿ ಬಿಡಲಿ, ವ್ಯಕ್ತಿ ಒಳ್ಳೆಯವನಿರಲಿ ಬಿಡಲಿ, ಕೆಲಸ ಮಾಡಿಕೊಡಬೇಕೆಂಬ ಉನ್ನತ ವಿಚಾರ ಅವರದು. ಅದೇಷ್ಟೋ ಸಲ ಕೆಲಸವಾಗದೇ ನಿರಾಸೆಗೊಂಡ ಬಗೆಗೆ ತಮ್ಮ ಡೈರಿಯಲ್ಲಿ ದಾಖಲಿಸಿದ್ದಾರೆ.

ತಮ್ಮ ಸಮಕಾಲೀನ ಜನರೊಂದಿಗೆ ತಾವು ನೆಚ್ಚಿದ ಜನರೊಂದಿಗೆ ಹರಟೆ ಹೊಡೆಯುವುದೆಂದರೆ ಸಾಹೇಬರಿಗೆ ಬಲು ಅಚ್ಚುಮೆಚ್ಚು. ಹರಟೆಯ ಮಧ್ಯೆ ವೈಚಾರಿಕ ಲಹರಿಗಳು ಹರಿದು ಬರುತ್ತಿದ್ದವು. ದಿನಾಲು ದಿನಚರಿಯನ್ನು ಬರೆಯುವುದು ಅವರ ಹವ್ಯಾಸವಾಗಿತ್ತು. ಆಯಾ ದಿನದ ಕೆಲಸ ಸಂದರ್ಭ ಭೇಟಿ ಖರ್ಚಿನ ವಿವರಗಳು ಇರುತ್ತಿದ್ದವು. ಈಗಲೂ ಅವರ ದಿನಚರಿಗಳನ್ನು

ಅವರ ಮಕ್ಕಳು ಕಾಯ್ದಿಟ್ಟಿದ್ದಾರೆ. ಅವರ ದಿನಚರಿಗಳು ಖಾಸಗಿ ದಿನಚರಿಗಳಾಗಿರದೇ ಸಾರ್ವಜನಿಕ ಬದುಕಿನ ದಾಖಲೆಗಳಾಗಿವೆ.

ಹೊರಕೇರಿ ಸಾಹೇಬರು 1975ರಿಂದ 1977ರವರೆಗೆ ಶಾಸಕರಾಗಿದ್ದರು. ತೀರಾ ಕಡಿಮೆ ಕಾಲಾವಧಿ. ಕಡಿಮೆ ಕಾಲಾವಧಿಯಲ್ಲಿಯೂ ಮಹಾದಾಯಿ ಮಲಪ್ರಭ ನದಿ ಜೋಡಣೆ, ಶಿವಯೋಗ ಮಂದಿರ 'ಕಿರು ಜಲ ವಿದ್ಯುತ್ ಯೋಜನೆ ಇವರ ಮಹತ್ವಾಕಾಂಕ್ಷೆ ಯೋಜನೆಗಳು. ಅದನ್ನು ಮೊದಲ ಬಾರಿಗೆ ಶಾಸನ ಸಭೆಯಲ್ಲಿ ಪ್ರಸ್ತಾಪಿಸಿದ ಹಿರಿಮೆ ಇವರಿಗಿದೆ. ಶಾಸಕರಾಗಿದ್ದಾಗ ಬೆಂಗಳೂರಿಗೆ ಹೋಗುವಾಗ ಪಾರದ ಬುತ್ತಿ ಧಾಣಕಶಿರೂರಿನಿಂದ ಬೇಲೂರಿಗೆ ತಂದುಕೊಡಬೇಕಾಗುತ್ತಿತ್ತು. ಶಾಸಕತ್ವದ ಅವಧಿ ಮುಗಿದ ಮೇಲೆ ರಾಜಕೀಯ ಸ್ಥಿತ್ಯಂತರಗಳು ಉಂಟಾದವು. ಇವರು ಅನಿವಾರ್ಯವಾಗಿ ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ ಕೆ.ಎಚ್.ಪಾಟೀಲರನ್ನು ಬೆಂಬಲಿಸಿದ್ದರಿಂದ ಮತ್ತೊಂದು ಅವಧಿಗೆ ಇವರು ಶಾಸಕರಾಗುವುದು ವಂಚಿತವಾಯಿತು. ರೆಡ್ಡಿ ಕಾಂಗ್ರೇಸ್ಸನಿಂದ ಸ್ಪರ್ಧಿಸಲು ಕರೆ ಬಂದರೂ ತಮ್ಮ ಗೆಳೆಯರಾದ ಜಾಲಿಹಾಳದ ಲಗಳಿ ಸಾಹುಕಾರರಿಗೆ ಅವಕಾಶ ಬಿಟ್ಟುಕೊಟ್ಟರು. ದುರ್ದೈವವಶಾತ್ ಕಾಂಗ್ರೇಸ್ ಮುಗ್ಗರಿಸಿತು. ಮುಂದೆ ಜನತಾ ಸರ್ಕಾರ ಅಧಿಕಾರಕ್ಕೆ ಬಂದಾಗ ಇವರ ಸಮಕಾಲೀನರು ಜನತಾದಳಕ್ಕೆ ಹೋದರು. ಅನಿವಾರ್ಯವಾಗಿ ಒಬ್ಬಂಟಿಗರಾಗಿರದೇ ಸಾಹೇಬರು ಜನತಾದಳ ಸೇರಿದರು. ಆದರೆ ಅವರಿಗೆ ಅದು ಸರಿಬರಲಿಲ್ಲ. ಅಷ್ಟೋತ್ತಿಗೆ ಲಗಳಿಯವರ ಅನಾರೋಗ್ಯ ಕ್ಷೀಣಿಸಿತ್ತು. ಅವರನ್ನು ಮಾತನಾಡಿಸಲು ಚಿಮ್ಮನಕಟ್ಟಿಯವರು ಜಾಲಿಹಾಳಕ್ಕೆ ನಡೆದಿದ್ದರು. ಸಾಹೇಬರು ತಮ್ಮ ಮಗನೊಂದಿಗೆ ಬದಾಮಿಗೆ ನಡೆದಿದ್ದರು. ಆಕಸ್ಮಾತ್ ಭೇಟಿ ಚೊಳಚಗುಡ್ಡದ ಸೇತುವೆ ಮೇಲೆ ನಡೆಯಿತು. ಬಿ.ಬಿ. ಚಿಮ್ಮನಕಟ್ಟಿ ಅವರು ಸಾಹೇಬರನ್ನು ಕಾಂಗ್ರೇಸ್‌ಗೆ ವಾಪಸ್ಸು ಬರಲು ಆಹ್ವಾನಿಸಿದರು. ಅವಾಗ ತಮ್ಮ ಮಗನೊಂದಿಗೆ ಅಲ್ಲಿಯೇ ಚರ್ಚಿಸಿ ಒಪ್ಪಿಗೆ ಪಡೆದರು. ಮರುದಿನವೇ ಕಾಂಗ್ರೇಸ್ ಸೇರಿದ ಸುದ್ದಿ ಪತ್ರಿಕೆಗಳಲ್ಲಿ ಬಂದಿತು. ದುರ್ದೈವವಶಾತ್ ಚಿಮ್ಮನಕಟ್ಟಿಯವರು ಆ ಚುನಾವಣೆಯಲ್ಲಿ ಸೋತರು.

ಹೆಚ್ಚು ಕಡಿಮೆ 1960ರಿಂದ 1998ರವರೆಗೆ ಬಹಳಷ್ಟು ಚುನಾವಣೆಗಳಲ್ಲಿ ಭಾಗವಹಿಸಿದ್ದಾರೆ. ಇಚೀನ ಚುನಾವಣೆಗೆ ಬೇಸತ್ತು ಚುನಾವಣಾ ಕಾರ್ಯದಿಂದ ದೂರ ಉಳಿದಿದ್ದರು. ಆದರೆ ಸಾರ್ವಜನಿಕ ಸೇವೆಯಿಂದ ಮುಕ್ತರಾಗಿರಲಿಲ್ಲ. ವಯಸ್ಸು ಆರೋಗ್ಯ ಇವುಗಳನ್ನು ಗಮನಿಸದೇ ಸೇವೆ ಸೇವೆ ಎಂದು

ಹಲುಬುತ್ತಾ 2001 ಎಪ್ರೀಲ್ 28 ರಂದು ಹಾಸಿಗೆ ಹಿಡಿದರು. ಮಗ ಕಟ್ಟಿಸಿದ ಮನೆಯಲ್ಲಿಯೇ ಬಂದಿರಲು ಒಪ್ಪಿಕೊಂಡರು. ವಾರಗಟ್ಟಲೇ ವೈದ್ಯರು ಚಿಕಿತ್ಸೆ ನೀಡಿದರು. ಫಲಕಾರಿಯಾಗಲಿಲ್ಲ. ಶ್ವಾಸಕೋಶದ ನಾಳದ ತೊಂದರೆಯಿಂದಾಗಿ 06.05.2001ರಂದು ರಾತ್ರಿ 11 ಗಂಟೆಗೆ ಲಿಂಗೈಕ್ಯರಾದರು.

ಸಾಹೇಬರು ಲಿಂಗೈಕ್ಯರಾದಾಗ ಅವರ ಒಟ್ಟು ಮನೆತನದ ಸಾಲ ಹದಿನಾರು ಲಕ್ಷ. ಒಬ್ಬ ಶಾಸಕ ಇವತ್ತು ಗಳಿಸಿದ್ದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಆದರೆ ಆ ಕಾಲದ ಶಾಸಕರು ದೇಶಭಕ್ತಿ, ಪ್ರಾಮಾಣಿಕತೆ ಇವುಗಳಿಗೆ ಬದ್ಧರಾಗಿ ನಡೆದುಕೊಂಡಿದ್ದು ಈಗ ಒಂದು ಐತಿಹ್ಯ. ಹೊರಕೇರಿ ಸಾಹೇಬರಿಗೆ ಬಂದ ಪಾಲಿನ ಬಾದಾಮಿ ಮನೆ, ಢಾಣಕಶಿರೂರಿನ ಐದು ಅಂಕಣದ ಮನೆ ಇವುಗಳಿವೆ. ಎಪ್ಪತ್ತು ಎಕರೆಗಳಲ್ಲಿ ಹತ್ತು ಎಕರೆ ಸಾಲಕ್ಕಾಗಿ ಮಾರಿದ್ದು, ಅರವತ್ತು ಎಕರೆ ಉಳಿದಿದೆ. ಇದರರ್ಥ ಬಿ.ಎಂ.ಹೊರಕೇರಿಯವರು ಏನು ಗಳಿಸಿದ್ದಾರೆ, ಏನು ಉಳಿಸಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

ಅವರ ಹಿರಿಯ ಮಗ ಡಾ.ಮೃತ್ಯುಂಜಯ ಹೊರಕೇರಿ ಅವರು ಗುಲಬರ್ಗಾ ವಿಶ್ವವಿದ್ಯಾಲಯದ ರಾಯಚೂರು ಸ್ನಾತಕೋತ್ತರ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿ ಹಾಗೂ ವಿಶೇಷಾಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರಿಗೆ ಇಬ್ಬರು ಮಕ್ಕಳಿದ್ದಾರೆ. ಮಗಳು ರಾಜೇಶ್ವರಿ ಎಂ.ಎಸ್ಸಿ ಕಂಪ್ಯೂಟರ್ ಪದವೀಧರೆ, ಮಗ ರಿಷಿಕುಮಾರ ಬಿ.ಇ. ಪದವೀಧರ. ಇನ್ನೊಬ್ಬ ಮಗನಿಗೆ ಮಕ್ಕಳಿಲ್ಲವಾದರೂ ಇವರನ್ನೇ ತಮ್ಮ ಮಕ್ಕಳೆಂದು ಭಾವಿಸಿ ಜೀವನ ಸಾಗಿಸುತ್ತಿದ್ದಾರೆ. ಒಟ್ಟಿನಲ್ಲಿ ಹೊರಕೇರಿ ಸಾಹೇಬರು ಬಾದಾಮಿ ತಾಲೂಕಿನ ಅಭಿವೃದ್ಧಿಯ ಹರಿಕಾರ, ಶಿವಯೋಗ ಮಂದಿರದ ಶರಣ, ಮಹಾದಾಯಿ ಮಲಪ್ರಭಾ ನದಿ ಜೋಡಣೆಯ ಕನಸುಗಾರ, ಶಿವಯೋಗ ಮಂದಿರದ ಕಿರು ಜಲವಿದ್ಯುತ್ ಯೋಜನೆಯ ರೂವಾರಿ, ಮಠಮಾನ್ಯಗಳ ಸದ್ಭಕ್ತ, ಸಮಾಜ ಸೇವಕ, ಜನಪದ ಸಾಹಿತಿ, ಸರ್ವಜ್ಞ ಪ್ರಿಯ ಇಂತಹ ಸಂಕೀರ್ಣ ಬದುಕಿನ ಬಿ.ಎಂ.ಹೊರಕೇರಿಯವರ ಬದುಕು ಆದರ್ಶಮಯವಾದುದು. ಬಿ.ಎಂ.ಹೊರಕೇರಿಯವರು ಮಾರು ಗೆದ್ದರೇ ವಿನಾಃ ಮನೆಗೆದೆಯಲಿಲ್ಲ.

* * * * *

# ಖಾನಾಪುರ ತಾಲ್ಲೂಕಿನ ಮಹಾದಾಯಿ ನದಿ ತಿರುವು

16.02.1976

**ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು**

a) whether there is a proposal before government for diverting and storing the water of Mahadayi River and increase the water source capacity;

b) if so, whether plans and astimate have been prepared;

c) if so, the additional areas to be included under command area?

ನೀರಾವರಿ ಮಂತ್ರಿ ಶ್ರೀ ಎಸ್.ಬಿ. ನಾಗರಾಳ ಅವರ ಉತ್ತರಗಳು

a) Yes.

b) the project is still under preliminary stage of investigation.

c) In view of reply furnished at item(b)above reply to this question does not arise.

**ಶ್ರೀ ಬಿ.ಎಂ.ಹೊರಕೇರಿ**–ಮಲಪ್ರಭ ಮೇಲ್ದಂಡೆ ನವಿಲು ತೀರ್ಥದ ಡೌನ್‌ಸ್ಕ್ರೀಮ್ ಅನೇಕ ಯೋಜನೆಗಳು ಕಾರ್ಯಗತವಾಗಿವೆಯೋ? ಈ ಯೋಜನೆಗಳಿಂದ ಸುಮಾರು5 ಲಕ್ಷ ಎಕರೆಗೆ ನೀರು ಒದಗಿಸುವುದಕ್ಕೆ ಆಗುತ್ತದೆಯೋ? ಚುಲಕಿ ಮತ್ತು ಚೊಳಚಗುಡ್ಡ ಹಾಗೂ ಕೆಂಗೇಲ ಹತ್ತಿರ ಆಣೆಕಟ್ಟನ್ನು ನಿರ್ಮಿಸುವ ವಿಚಾರವಿದೆಯೆ? ಹುಬ್ಬಳ್ಳಿ ಮತ್ತು ಧಾರವಾಡ ನಗರಗಳಿಗೆ ಕುಡಿಯುವ ನೀರು ಸಹ ಇಲ್ಲಿಂದಲೇ ಹೋಗಬೇಕಾಗುತ್ತದೆ.

**ಶ್ರೀ ಎಸ್.ಬಿ.ನಾಗರಾಳ**–ಮಹದಾಯಿ ನದಿ ನೀರಿನ ಮಾರ್ಗವನ್ನು ಡೂವರ್ ಮಾಡುವ ವಿಚಾರ ಸರ್ಕಾರದಲ್ಲಿದೆ. ಪೂರ್ವ ಭಾವಿ ಇನ್‌ವೆಸ್ಟಿಗೇಷನ್ ನಡೆಯುತ್ತಿದ್ದು ಮಹದಾಯಿ ಮತ್ತು ಮಲಪ್ರಭಾದಿಂದ ವಿಶೇಷವಾಗಿ ಸೌಲಭ್ಯಗಳು ಸಿಗುತ್ತವೆ ಎನ್ನುವುದು ಸರ್ಕಾರಕ್ಕೆ ಗೊತ್ತಿದೆ. ಇನ್‌ವೆಸ್ಟಿಗೇಷನ್‌ಗೋಸ್ಕರ ಸರ್ಕಾರ ಆದೇಶ ಕೊಟ್ಟಿದೆ.

**ಶ್ರೀ ಬಿ.ಎಂ.ಹೊರಕೇರಿ**– ಬಿಜಾಪುರ ಮತ್ತು ಗುಲ್ಬರ್ಗ ಜಿಲ್ಲೆಗಳಲ್ಲಿ ಅಲ್ಪ ಮತ್ತು ಅಕಾಲಿಕ ಹಾಗೂ ಅನಿಶ್ಚಿತ ಮಳೆಗಳಿಂದ ಬೆಳೆಗಳು ಹೋಗುತ್ತಿದ್ದು, ಆ ಕಡೆ ಕೋಟ್ಯಾಂತರ ರೂಪಾಯಿಗಳ ಪರಿಹಾರ ಕೊಡುವ ಬದಲು ಇಂಥ ಯೋಜನೆಗಳನ್ನು ಕಾರ್ಯಗತ ಮಾಡಿದರೆ ಒಳ್ಳೆಯದಲ್ಲವೆ?

**ಶ್ರೀ ಎಸ್.ಬಿ.ನಾಗರಹಾಳ**–ಸೂಕ್ತವಾದ ಸಲಹೆ, ಇನ್‌ವೆಸ್ಟಿಗೇಷನ್ ಆದ ಮೇಲೆ ಸರ್ಕಾರ ಇದರ ಬಗ್ಗೆ ಯೋಜನೆ ಮಾಡುತ್ತದೆ.

# ವಿಜಾಪುರ ಜಿಲ್ಲೆಯ ಕೈ ಮಗ್ಗ ಯೋಜನೆ

18.02.1976

ಶ್ರೀ ಹೊರಕೇರಿ ಅವರ ಪ್ರಶ್ನೆಗಳು

a) whether intensive Handloom Development project has been has up to cover the dense weaver centres of Guledgud, Kamatagi,Aminagad, Sulebhaavi, Gudur, katakontageri, Kokanakoppa and kerur.

b) if so, whether the survey work for identification of weavers villages have been completed in these area or not;

c) if not, the steps that have been taken to implement them speedily;

ಸಣ್ಣ ಕೈಗಾರಿಕ ಸಚಿವ ಶ್ರೀ ವೀರಪ್ಪಮೊಯಿಲಿ ಅವರ ಉತ್ತರಗಳು

a) No

b) Survey work has been completed in ilkal and kamatagi centres

c) Does not arise

ಶ್ರೀ ಬಿ.ಎಂ.ಹೊರಕೇರಿ–ಇದರಲ್ಲಿ ಇಷ್ಟೇ ಇಲಕಲ್, ಗುಳೇದಗುಡ್ಡಟೌನ್‌ಗಳಲ್ಲಿ ವೀವರ್ಸ್ ಸೆಂಟರ್ಸ್ ಇವೆ. ಅಲ್ಲಿ ಪ್ರಾಜೆಕ್ಟ್ ತೆಗೆದುಕೊಳ್ಳಬೇಕಾದ್ದು ಸರಿ. ಆದರೆ ಇನ್ನೂ ಕೂಡ ತೆಗೆದುಕೊಂಡಿಲ್ಲ. ಇದನ್ನು ಯಾವಾಗ ತೆಗೆದುಕೊಳ್ಳುತ್ತೀರಿ ಎಂಬುದನ್ನು ತಿಳಿಸುತ್ತೀರಾ ಸ್ವಾಮಿ?

ಶ್ರೀ ಎಂ.ವೀರಪ್ಪ ಮೊಯಿಲಿ–ಈ ಪ್ರಾಜೆಕ್ಟ್‌ನ್ನು ತೆಗೆದುಕೊಳ್ಳುವ ಸಮೀಕ್ಷೆಯನ್ನು ನಾವು ನಡೆಸುತ್ತಿದ್ದೇವೆ. ಇಲಕಲ್, ಕಮತಗಿ ಈ ಎರಡು ಗ್ರಾಮಗಳಲ್ಲಿ ಸಮೀಕ್ಷೆ ನಡೆಸಿದೆ. ಅಲ್ಲಿ 4799 ಹ್ಯಾಂಡ್‌ಲೂಮ್ ನಡೆಯುತ್ತಿದೆ. ಒಟ್ಟು ಈ ಇಡೀ ಪ್ರಾಜೆಕ್ಟ್‌ನಲ್ಲಿ 13 ಸಾವಿರ ಹ್ಯಾಂಡ್‌ಲೂಮ್‌ನ್ನು ಅಳವಡಿಸಬೇಕೆಂದು ಒಂದು ಯೋಜನೆಯನು ಹಾಕಿಕೊಂಡಿದ್ದೇವೆ. ಇದರ ಕರಡು ಪ್ರತಿಯನ್ನು ಈಗಾಗಲೇ ತಯಾರು ಮಾಡಿದ್ದೇವೆ. ಮಾರ್ಚ್ 1976ರೊಳಗಾಗಿ ಈ ಬಗ್ಗೆ ಕಾರ್ಯಕ್ರಮವನ್ನು ತೆಗೆದುಕೊಳ್ಳು ಪ್ರಯತ್ನ ಮಾಡುತ್ತೇವೆ.

**ಶ್ರೀ ಬಿ.ಎಂ. ಹೊರಕೇರಿ**–ಸ್ವಾಮಿ, ತಾವು ಹಾಕಿಕೊಂಡಿರುವ ಈ ಯೊಜನೆಯಲ್ಲಿ ಇಲಕಲ್, ಗುಳೇದಗುಡ್ಡ, ಕಮತಗಿ, ಅಮೀನಗಡ, ಸೂಳಿಭಾವಿ, ಗುಡೂರು, ಕಟಗೇರಿ, ಕೊಂಕನಕೊಪ್ಪ ಇವೆಲ್ಲವು ಬರುತ್ತವೆಯೇ?

**ಶ್ರೀ ಎಂ.ವೀರಪ್ಪ ಮೊಯಿಲಿ**– ಈ ಯೋಜನೆಗೆ ಸೆಂಟ್ರಲ್ ಅಸಿಸ್ಟೆನ್ಸ್ ಸಿಕ್ಕಿದೆ. ಇದರ ಕರಡು ಪ್ರತಿಯನ್ನು ತಯಾರು ಮಾಡಿದ್ದೇವೆ. ಇದನ್ನು ಹಾಂಡ್‌ಲೂಂ ಕಾರ್ಪೋರೇಷನ್ ಬೋರ್ಡ್‌ನ ಮುಂದಿಟ್ಟು ಪಾಸ್ ಆದ ಮೇಲೆ ಕೇಂದ್ರ ಸರ್ಕಾರಕ್ಕೆ ಕಳುಹಿಸಿಕೊಡುತ್ತೇವೆ.

**ಶ್ರೀ ಬಿ.ಎಂ.ಹೊರಕೇರಿ**– ಸ್ವಾಮಿ ಇಲಕಲ್ ಕೇಂದ್ರದಲ್ಲಿ ಮತ್ತು ಗುಳೇದಗುಡ್ಡ ಕೇಂದ್ರದಲ್ಲಿ ಸೀರೆ ಇತ್ಯಾದಿ ಹೆಣ್ಣು ಮಕ್ಕಳ ಬಟ್ಟೆಗಳನ್ನು ವಿಶೇಷವಾಗಿ ತಯಾರು ಮಾಡುತ್ತಿದ್ದಾರೆ. ಆದರೆ ಬಿಳಿ ಬಟ್ಟೆಯನ್ನು ಮಾತ್ರ ತಯಾರಿಸುತ್ತಿಲ್ಲ. ಹಿಂದೂ ಸಂಪ್ರದಾಯದ ಪ್ರಕಾರ ಲಗ್ನಗಳಲ್ಲಿ ಎದ್ದು ಕಾಣುತ್ತದೆ. ಈಗ ಹೆಚ್ಚಿನ ಬೇಡಿಕೆ ಹೆಣ್ಣು ಮಕ್ಕಳ ಬಟ್ಟೆಗೆ ಇರುವುದರಿಂದ ಅದನ್ನು ತಯಾರಿಸುತ್ತಿದ್ದಾರೆ. ಆದರೆ ಮುಂದಿನ ವರ್ಷ ಈ ಬಟ್ಟೆಗಳಿಗೆ ಬೇಡಿಕೆ ಇಲ್ಲದೇ ಹೋಗುವುದರಿಂದ ಅವರಿಗೆ ಕೆಲಸ ಇಲ್ಲದಂತಾಗಿ ಆಗ ಒಂದು ರೀತಿಯ ಬರಗಾಲ ಬರುವಂಥ ಸಂದರ್ಭ ಇರುವುದರಿಂದ ಆಗ ಇದರ ಬಗ್ಗೆ ಏನಾದರೂ ಸೂಕ್ತ ಕಾರ್ಯಕ್ರಮವನ್ನು ತೆಗೆದುಕೊಳ್ಳುತ್ತೀರಾ?

**ಶ್ರೀ ಎಂ.ವೀರಪ್ಪ ಮೊಯಿಲಿ**– 6 ಗ್ರಾಮಗಳಿಗೆ ಈ ಯೋಜನೆಯನ್ನು ವಿಸ್ತರಿಸಬೇಕೆಂದಿದ್ದರೂ ಕೂಡ ಸಮೀಕ್ಷೆ ನಡೆಸಿರತಕ್ಕ ಕೆಲವು ತಾಲ್ಲೂಕುಗಳಿಗೆ ಹೋಗಿ ತಕ್ಷಣ ಈ ಯೋಜನೆಯನ್ನು ಕಾರ್ಯಗತ ಮಾಡುತ್ತೇವೆ.

* * * * *

## ಪ್ರಾಥಮಿಕ ಶಾಲೆಯ ಪ್ರಾಯೋಗಿಕ ಪಠ್ಯ

19.02.1976

### ಶ್ರೀ ಬಿ.ಎಂ. ಹೊರಕೇರಿ ಅವರ ಉತ್ತರಗಳು

a) Whether the primary school text commitee has adopted the new concept to include experimental lessons, in the text books on rural oriented base.

b) if so the proposal of such experimental lessons included in each of the text book of primary school standards during the year 1975-76

c) whether lessons oreation bias and zeal towards agricultural amongst the children to have basic primarees knowledge of agriculture to them have been included in the text books:

d) if so, in what proportion ?

### ಶಿಕ್ಷಣ ಮಂತ್ರಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಯವರ ಉತ್ತರ

a) Yes

b) B) No specific proportion is fixed. However care has been taken to more emphasis on agriculture and its role in the National economy both in language text books and text book of core subjects.

c) No specific ephasis is laid on teaching agriculture in our country's economy and rural life is brought home in lessons on Science, Geography, Civics. A few lessons on this subject have also been included in the language text books.

d) No specific proportion is fixed but adequate attention is paid as indicated above.

**ಶ್ರೀ ಬಿ.ಎಂ.ಹೊರಕೇರಿ**-(ಅ)ಗೆ ಕೊಟ್ಟಿರುವ ತಮ್ಮ ಉತ್ತರದಲ್ಲಿ 'ಯಾವುದೇ ರೀತಿಯ ಪ್ರಮಾಣವನ್ನು ಗೊತ್ತುಪಡಿಸಿರುವುದಿಲ್ಲ. ಆದಾಗ್ಯೂ ಭಾಷಾ ಹಾಗೂ ಮೂಲ ವಿಷಯದ ಪಠ್ಯ ಪುಸ್ತಕಗಳಲ್ಲಿ ಕೃಷಿಯ ಬಗ್ಗೆ ಹಾಗೂ ರಾಷ್ಟ್ರೀಯ ಆರ್ಥಿಕ ರಂಗದಲ್ಲಿ ಅದರ ಪಾತ್ರದ ಪ್ರಧಾನ್ಯತೆಯನ್ನು ಬಿಂಬಿಸುವಂತೆ ಕಾಳಜಿವಹಿಸಲಾಗಿದೆ ಎಂದು' ಬರೆದಿದ್ದೀರಿ?

**ಶ್ರೀ ಎಂ. ಮಲ್ಲಿಕಾರ್ಜುನಸ್ವಾಮಿ**– ವ್ಯವಸಾಯದ ಬಗ್ಗೆ ಗ್ರಾಮಜೀವನ ವಿಷಯುವಾಗಿ ನಾಗರೀಕತೆಯು ವಿಷಯುವಾಗಿ ಸೋಷಿಯಲ್ ಸ್ಟಡೀಸ್ ವ್ಯವಸಾಯಕ್ಕೆ ಸಂಬಂಧಪಟ್ಟಂತೆ ಕೆಲವು ಪಾಠಗಳನ್ನು ಬರೆಸಿದ್ದೇವೆ.

**ಶ್ರೀ ಬಿ.ಎಂ. ಹೊರಕೇರಿ**–ಕೃಷಿ ಉತ್ಪನ್ನ ಯೋಗ್ಯವಾದ ವಿಷಯ. ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ ಯೋಗ್ಯ ವಿಜ್ಞಾನ ಬರುವುದಕ್ಕೆ ಈ ವಿಜ್ಞಾನ ಕಾಲದಲ್ಲಿ ಕೃಷಿ ವಿಜ್ಞಾನದ ಬಗ್ಗೆ ಮೂಲಭೂತವಾಗಿ ಜ್ಞಾನವನ್ನು ಕೊಡಬೇಕು. ಅಗ್ರಿಕಲ್ಚರ್ ಬಗ್ಗೆ ರೈತರ ಮಕ್ಕಳಿಗೆ ಸಣ್ಣ ಪ್ರಾಥಮಿಕ ಶಾಲೆಗಳಲ್ಲಿ ಈ ಎಲ್ಲಾ ಪಾಠಗಳು ಬೇಕು ಎಂದು ಹೇಳುತ್ತೇನೆ.

**ಶ್ರೀಎಂ.ಮಲ್ಲಿಕಾರ್ಜುನಸ್ವಾಮಿ**–ಅದಕ್ಕೋಸ್ಕರವಾಗಿಯೇ ವರ್ಕ್ ಎಕ್ಸ್‌ಪೀರಿಯೆನ್ಸ್ ಎಂದು ಪ್ರಾಥಮಿಕ ಶಾಲೆಗಳ ಮಟ್ಟದಲ್ಲಿ ಇಂಟರ್‌ಡ್ಯೂಸ್ ಮಾಡುವುದು ಅದೇ ನಮ್ಮ ಉದ್ದೇಶವೂ ಕೂಡ.

**ಶ್ರಿ ಬಿ.ಎಂ.ಹೊರಕೇರಿ**–ತಾವು ಹೇಳಿದಂತೆ ಮಕ್ಕಳಿಗೆ ಬರೀ ತಿಯರಿ ಆದರೆ ಸಾಲದು ಪ್ರಾಕ್ಟಿಕಲ್ ಇರಬೇಕು. ಆ ತತ್ವವನ್ನು ಇಟ್ಟುಕೊಂಡು ಅಗ್ರಿಕಲ್ಚರಲ್ ಎಕ್ಸ್‌ಟೆನ್‌ಷನ್ ಅಧಿಕಾರಿಗಳನ್ನು ಕಳುಹಿಸಿ ಪ್ರಾಕ್ಟಿಕಲ್ ಆಗಿ ಅವರಿಗೆ ವಿಷಯಗಳನ್ನು ತಿಳಿಸಿದರೆ ಸಣ್ಣ ಮಕ್ಕಳಾಗಿದ್ದಾಗಲೇ ಬಂದರೆ ಬಹಳ ಪ್ರಭುದ್ಧವಾಗಿ ಅವರಿಗೆ ಅನುಕೂಲವಾಗುತ್ತದೆ. ಆದ್ದರಿಂದ ಅವರಿಗೆ ಪ್ರಾಕ್ಟಿಕಲ್ ತರಬೇತಿ ಕೊಡುವುದನ್ನು ಮಾಡಬೇಕು.

**ಶ್ರೀ ಎಂ.ಮಲ್ಲಿಕಾರ್ಜುನಸ್ವಾಮಿ**–ಆಗಬಹುದು.

* * * * *

## ಮಲಪ್ರಭಾ ಎಡದಂಡೆ ಕಾಲುವೆ ಕೆಲಸ

20.02.1976

**ಶ್ರೀ ಬಿ.ಎಂ.ಹೊರಕೇರಿ**–ಸ್ವಾಮಿ, ತಮ್ಮ ಉತ್ತರದಲ್ಲಿ ಮಲಪ್ರಭಾ ಎಡದಂಡೆ ಕಾಲುವೆಯ ಕಾಮಗಾರಿಯು ಹೆಚ್ಚಿನ ಪ್ರಗತಿಯಲ್ಲಿ ನಡೆಯುತ್ತಿದೆ ಎಂಬ ಬಗ್ಗೆ ತಿಳಿದಿದೆ. ಆದರೆ ಅದರ ಬಗ್ಗೆ ಆದಂತಹ ಖರ್ಚಿನ ಅಂಕಿ ಸಂಖ್ಯೆಗಳನ್ನು ಕೊಟ್ಟಿಲ್ಲ ಅದನ್ನು ತಿಳಿಸುತ್ತೀರಾ?

**ಶ್ರೀ ಎಂ.ವೀರಪ್ಪ ಮೊಯಿಲಿ**– ಈಗ ಈ ಬಲದಂಡೆ ಕಾಲುವೆಯು 1966ರಲ್ಲಿ ಪ್ರಾರಂಭವಾಗಿದ್ದು, ನಂತರ 1970ನೇ ಇಸವಿಯಲ್ಲಿ ಎಡದಂಡೆ ಕಾಲುವೆಯು ಪ್ರಾರಂಭವಾದ್ದರಿಂದ ಖರ್ಚಿನ ಮಟ್ಟಿಗೆ ಸ್ವಲ್ಪ ಹೆಚ್ಚು ಕಡಿಮೆಯಾಗಿದೆ.

**ಶ್ರೀ ಬಿ.ಎಂ.ಹೊರಕೇರಿ**– ಸ್ವಾಮಿ, ಹೆಚ್ಚಿನ ಪ್ರಗತಿ ಎಂದರೆ ಅದರ ಬಗ್ಗೆ ತುಲನಾತ್ಮಕ ಅಂಕಿ ಇದೆಯೇ? ಅಲ್ಲದೇ 1973–74ರಲ್ಲಿ ಕಾಲುವೆಯಲ್ಲಿ ನೀರನ್ನು ಬಿಡುಗಡೆ ಮಾಡಲಾಗಿದೆ ಎಂದು ತಿಳಿಸಿದೆ. ಈಗ 3628 ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸಿದೆ ಎಂದರೆ ಅದು ಯಾವ ಕ್ಷೇತ್ರದಲ್ಲಿ ನೀರನ್ನು ಒದಗಿಸಲಾಗಿದೆ.?

**ಶ್ರೀ ಎಂ.ವೀರಪ್ಪ ಮೊಯಿಲಿ**– ಅದರ ಬಗ್ಗೆ ಪ್ರತ್ಯೇಕವಾದ ನೋಟೀಸ್ ಬೇಕು.

* * * * *

## ಕೃಷಿ ಸಹಾಯಕರ ಯೋಜನಾನುದಾನ

02.03.1976

### ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು

a) Whether it is a fact that project allowance of the Agricultural Department in Bhadra project, M.L.B.C. and G.L.B.C. as is being paid to the other departmental staff, viz, P.W.D. and Horticultural working in the project area;

a) the reasons for this discrimination in drawing of the project allowance;

c) Whether the staff of the Agricultural Department are being paid project allowance;

d) if not, the reasons for not paying?

### ಕೃಷಿ ಮಂತ್ರಿ ಶ್ರೀ ಎನ್. ಚಿಕ್ಕೇಗೌಡರ ಉತ್ತರಗಳು

a) Yes-public works department staff working on these projects are getting the project allowance.

b) the question of payment of project allowance to the staff of Argiculture Department working in these projects is under consideration of Governament.

c) No.

d) Does not arise in view of replies to clause (b) and (c)

**ಶ್ರೀ ಬಿ.ಎಂ.ಹೊರಕೇರಿ**– ಪ್ರಾಜೆಕ್ಟ್ ಆಲೋಯನ್ಸ್ ಅನ್ನು ಪಿ.ಡಬ್ಲ್ಯೂ.ಡಿ. ಇಲಾಖೆಯವರಿಗೆ ಕೊಡುತ್ತಿದ್ದಾರೆ. ವ್ಯವಸಾಯದ ಇಲಾಖೆಯವರು ಏಕೆ ಮಾಡಬಾರದು.

**ಶ್ರೀ ಎನ್.ಚಿಕ್ಕೆಗೌಡ**–ಇದು ಸರ್ಕಾರದ ಪರಿಶೀಲನೆಯಲ್ಲಿದೆ ಎಂದು ಹೇಳಿದ್ದೇನೆ.

**ಶ್ರೀ ಬಿ.ಎಂ. ಹೊರಕೇರಿ–** ಎಲ್ಲಾ ಇಲಾಖೆಯವರು ಕೊಡಬೇಕು ಎಂದು ಏಕೆ ಮಾಡಬಾರದು. ಕೇವಲ ಕಾಮಗಾರಿ ಇಲಾಖೆಯವರಿಗೆ ಕೊಡುತ್ತಿದ್ದಾರೆ. ಅದಕ್ಕೋಸ್ಕರ ಈ ಪ್ರಶ್ನೆಯನ್ನು ಕೇಳಿದೆ.

**ಶ್ರೀ ಎನ್. ಚಿಕ್ಕೆಗೌಡ–** ತುಕೋಳ್ ಕಮಿಷನ್‌ನಲ್ಲಿ ಯಾವ ಕೆಟಗರಿಯವರಿಗೆ ಪ್ರಾಜೆಕ್ಟ್ ಆಲೋಯನ್ಸ್ ಕೊಡಬೇಕು ಎನ್ನುವುದನ್ನು ಹೇಳಿದ್ದಾರೆ. ಇದರ ಬಗ್ಗೆ ಸ್ವಲ್ಪ ಭಿನ್ನಾಭಿಪ್ರಾಯ ಇದೆ. ನಾವು ಹಣಕಾಸಿನ ಸಚಿವರೊಂದಿಗೆ ವ್ಯವಹಾರ ಮಾಡುತ್ತಿದ್ದೇವೆ: ಎಲ್ಲಾ ಪರಿಶೀಲನೆ ಮಾಡಿ ಇದರ ಬಗ್ಗೆ ತೀರ್ಮಾನ ತೆಗೆದುಕೊಳ್ಳುತ್ತೇವೆ.

**ಶ್ರೀ ಬಿ.ಎಂ. ಹೊರಕೇರಿ–** ಫೀಲ್ಡ್ ಅಸಿಸ್ಟಂಟ್‌ಗಳು ಪದವೀಧರರಾಗಿದ್ದಾರೆ ಅವರಿಗೆ ಅಡ್ವಾನ್ಸ್ ಇನ್‌ಕ್ರಿಮೆಂಟ್ಸ್ ಕೊಟ್ಟಿದ್ದು, ಈಗ ಅದನ್ನು ರಿಫಂಡ ಮಾಡಬೇಕು ಎಂದು ಹೇಳಿದ್ದಾರೆ. ಇದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಎನ್.ಚಿಕ್ಕೆಗೌಡ**–ಇದಕ್ಕೆ ಪ್ರತ್ಯೇಕ ನೋಟಿಸ್ ಬೇಕು.

* * * * *

# ಬಾದಾಮಿಯಲ್ಲಿ ಕೃಷಿ ಸಂಶೋಧನಾ ಕ್ಷೇತ್ರ

05.03.1976

## ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು

a) Whether there is a proposal for starting a Research-cum-experimental farm at Badami in Southern part of Bijapur District to improved strains-particularly groundnut seeds:

b) If so. The action taken the by Governament on the proposel;

c) The present position?

## ಕೃಷಿ ಸಚಿವ ಶ್ರೀ ಎನ್. ಚಿಕ್ಕೇಗೌಡರ ಉತ್ತರಗಳು

A)to c) there is at present no proposal pending before the to start a research cum-experimental farm at Badami was however proposal sent to Governament by the University of tural Science during December 1972. Governament after having consider all aspect of the case intimated the University of Agricultrural Science's that the University must take a decision of it on taking into consideration the grants given to the University for this purpose. The University has deferred the proposal. The state Department of Agriculture does not conduct any research. All research work has been entrusted to the University of Agricultural Science who under take such work in operation with the Indian Council of Agricultural Research.

**ಶ್ರೀ ಬಿ.ಎಂ.ಹೊರಕೇರಿ**–ತಾವು ಉತ್ತರದಲ್ಲಿ ರೀಸರ್ಚ್ ಸ್ಟೇಷನ್‌ಗಳನ್ನು ತೆರೆಯುವ ವಿಚಾರದಲ್ಲಿ ಅದನ್ನು ವ್ಯವಸಾಯ ವಿಜ್ಞಾನಗಳ ವಿಶ್ವವಿದ್ಯಾಲಯದವರು ಭಾರತೀಯ ವ್ಯವಸಾಯ ಸಂಶೋಧನಾ ಮಂಡಲಿಯವರ ಸಹಕಾರದೊಂದಿಗೆ ಪ್ರಾರಂಭಿಸುತ್ತಾರೆಂದು ತಿಳಿಸಿದ್ದೀರಿ. ಆದರೆ ಈ ಸಂದರ್ಭದಲ್ಲಿ ವ್ಯವಸಾಯ ಇಲಾಖೆಯವರ ಪಾತ್ರವೇನು?

**ಶ್ರೀ ಎನ್.ಚಿಕ್ಕೇಗೌಡ**–ವ್ಯವಸಾಯ ಇಲಾಖೆಯುವರ ಪಾತ್ರವೇನೆಂದರೆ ಸಂಶೋಧನೆ ಮತ್ತು ವಿಸ್ತೀರ್ಣ ಕಾರ್ಯ ಏನು ಇದೆ ಅದನ್ನು ರೈತರ ಮನೆ ಬಾಗಿಲಿಗೆ ಮುಟ್ಟಿಸತಕ್ಕದ್ದು ಮತ್ತು ಕೃಷಿ ಸಂಶೋಧನ ಕೇಂದ್ರಗಳನ್ನು ಪರಿಶೋಧನೆ ಮಾಡತಕ್ಕದ್ದು. ಇವೆ ಈ ಇಲಾಖೆಯ ಕೆಲಸ.

**ಶ್ರೀ ಬಿ.ಎಂ.ಹೊರಕೇರಿ**–ಬಿಜಾಪುರ ಜಿಲ್ಲೆಯ ಉತ್ತರ ಮತ್ತು ದಕ್ಷಿಣ ಭಾಗದ ಭೂಮಿಯ ಗುಣ, ಮಣ್ಣಿನ ರಚನೆ, ನೈಸರ್ಗಿಕ ಹವೆಯಲ್ಲಿ ವ್ಯತ್ಯಾಸವಿದ್ದು ಈಗಾಗಲೇ ಅಲ್ಲಿ ರೀಸರ್ಚ್ ಸ್ಟೇಷನ್ ಕೆಲಸ ಮಾಡುತ್ತಿದೆ. ದಕ್ಷಿಣ ಭಾಗದಲ್ಲಿ ಕೆಂಪು ಮಣ್ಣು ಇದೆ. ಅಲ್ಲಿ ಪರಿಶೋಧನಾ ಕೇಂದ್ರವನ್ನು ತೆಗೆಯುವುದು ಅತ್ಯವಶ್ಯಕವಾಗಿದ್ದರೂ ಇನ್ನೂ ಅದು ಕಾರ್ಯಗತವಾಗಿಲ್ಲ. ಅದನ್ನು ವಿಶ್ವವಿದ್ಯಾನಿಲಯದವರು ಮಾಡುತ್ತಾರೆಯೇ? ಅದಕ್ಕೆ ನಮ್ಮ ರಾಜ್ಯದ ವ್ಯವಸಾಯ ಇಲಾಖೆಯವರು ಏನಾದರು ಶಿಫಾರಸ್ಸು ಮಾಡಬೇಕೋ?

**ಶ್ರೀ ಎನ್.ಚಿಕ್ಕೇಗೌಡ**–ಈ ವಿಚಾರದಲ್ಲಿ ಹಿಂದೆ ಬಾದಾಮಿ ತಾಲ್ಲೂಕಿನಲ್ಲಿ ಭೂಮಂಡಲಿಯ ಅಧ್ಯಕ್ಷರು ಮನವಿ ಮಾಡಿದ ಮೇಲೆ ಹಿಂದಿನ ಸಚಿವರು ಇದರ ಬಗ್ಗೆ ವಿವರವನ್ನು ಕಳುಹಿಸಿ ಕ್ರಮ ತೆಗೆದುಕೊಳ್ಳಿ ಎಂದು ಹೇಳಿದರು. ಅದರ ಪ್ರಕಾರ ವ್ಯವಸಾಯ ಇಲಾಖೆಯುವರು ಕೃಷಿ ಸಂಶೋಧನಾ ಕೇಂದ್ರದಲ್ಲಿರತಕ್ಕದ್ದು. ಕೃಷಿ ವಿಶ್ವವಿದ್ಯಾನಿಲಯದ ಕೆಲಸವೆಂದು· ಅವರಿಗೆ ಗ್ರ್ಯಾಂಟ್ ಮೂಲಕ ರೆಕರಿಂಗ್ ಮತ್ತು ನಾನ್ ರೆಕರಿಂಗ್ ಎಕ್ಸ್‌ಪೆಂಡಿಚರ್ ಸೇರಿ ಒಟ್ಟು ೧೮ ಲಕ್ಷ ರೂಪಾಯಿಗಳನ್ನು(೧,೦೨,೦೦೦ ಮತ್ತು ನಾನ್ ರೆಕರಿಂಗ್ ೭,೫೦,೦೦೦) ಒದಗಿಸಿದ್ದರು ಮತ್ತು ನಿಮಗೆ ಕೊಟ್ಟಿರುವ ಗ್ರ್ಯಾಂಟಿನಲ್ಲಿ ಪರಿಶೋಧನಾ ಕೇಂದ್ರದ ಅಗತ್ಯ ಇದ್ದರೆ ಪ್ರಾರಂಭ ಮಾಡಿ ಎಂದು ಕೃಷಿ ವಿಶ್ವವಿದ್ಯಾನಿಲಯಕ್ಕೆ ತಿಳಿಸಿದ್ದರು. ಅದಕ್ಕೆ ಅವರು ಹಣ ಸಾಲದೆಂದು ಹೇಳಿದ್ದಕ್ಕೆ ಇರತಕ್ಕ ಹಣದಲ್ಲೇ ಪ್ರಾರಂಭ ಮಾಡಿ ಎಂದು ಹೇಳಿದ್ದರು. ಆದರೆ ಇದುವರೆಗೆ ಮಾಡಿಲ್ಲ. ಆದುದರಿಂದ ಆ ಬಗ್ಗೆ ಅಗತ್ಯವಾಗಿ ಆದಷ್ಟು ಜಾಗ್ರತೆ ಕ್ರಮ ತೆಗೆದುಕೊಳ್ಳಬೇಕೆಂದು ಹೇಳಿದ್ದೇವೆ.

**ಶ್ರೀ ಬಿ.ಎಂ.ಹೊರಕೇರಿ** –ಬಾದಾಮಿ ತಾಲ್ಲೂಕು ಮುಖ್ಯವಾದ ಸ್ಥಳ ಅಲ್ಲಿ ಕಡಲೇಕಾಯಿಯನ್ನು ಬೆಳೆಯುತ್ತಾರೆ. ಆದರೂ ಸಹ ಸಂಶೋಧನಾ ಕ್ಷೇತ್ರದಲ್ಲಿ ಬೇರೆ ಕಡೆ ಪ್ರಾರಂಭಿಸುವ ಕಾರ್ಯ ಬೇರೆ ಕಡೆ ನಡೆದಿದೆ ಎಂದು ನಾನು ಕೇಳಿದ್ದೇನೆ. ಆದರೆ ಬಾದಾಮಿಯಲ್ಲಿ ಅದನ್ನು ಮಾಡುವುದಕ್ಕೆ ಏನಾದರೂ ತೊಂದರೆ ಇದೆಯೇ?

**ಶ್ರೀ ಎಚ್.ಚಿಕ್ಕೇಗೌಡ**–ಈಗ ಮಾನ್ಯ ಸದಸ್ಯರು ಬಾದಾಮಿ ತಾಲ್ಲೂಕಿನಲ್ಲಿರತಕ್ಕ ಭೂಮಿಯ ಗುಣ, ಮಣ್ಣಿನ ಗುಣ ಸ್ಪ್ರೆಡಿಂಗ್ ವೇರೈಟಿ ಆಫ್ ಗ್ರೌಂಡ ನಟ್ ವಿಷಯ ಎಲ್ಲಾ ಹೇಳಿದ್ದಾರೆ. ಅದರಂತೆ ಇದೇ ವಿಷಯವನ್ನು ಕೃಷಿ ವಿಶ್ವವಿದ್ಯಾನಿಲಯದವರೂ ಹೇಳಿದ್ದಾರೆ. ಸ್ಪ್ರೆಡಿಂಗ್ ವೇರೈಟಿ ಆಫ್ ಗ್ರೌಂಡ ನಟ್ ವಿಷಯದಲ್ಲಿ ಹೆಚ್ಚು ಪರಿಶೋಧನೆ ಮಾಡಬೇಕಾದ ಅಗತ್ಯತೆ ಕಂಡು ಬರುತ್ತದೆ. ಬಾದಾಮಿಯಲ್ಲಿ ಕೆಂಪು ಭೂಮಿ ಇದೆ. ಈ ತಾಲ್ಲೂಕಿನಲ್ಲಿ ಮಲಪ್ರಭಾ ಪ್ರಾಜೆಕ್ಟಿನಿಂದ ಸುಮಾರು ೩೦ ಸಾವಿರ ಎಕರೆ ನೀರಾವರಿ ಪ್ರದೇಶಕ್ಕೆ ಒಳಪಡುತ್ತದೆ. ಇದರ ಬಗ್ಗೆ ಅಗತ್ಯತೆ ಇದೆಯೆಂದು ಹೇಳಿದ್ದಾರೆ. ಹಣ ದೊರೆತ ತಕ್ಷಣ ಕೇಂದ್ರ ಸಂಶೋಧನಾ ಮಂಡಲಿಯವರು ಆ ಕೆಲಸವನ್ನು ತೆಗೆದುಕೊಳ್ಳುತ್ತಾರೆ.

* * * * *

# ಮಲಪ್ರಭಾ ನದಿಯ ಒಡ್ಡು ನಿರ್ಮಾಣ

09.03.1976

**ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು**

a) Whether a barrage across Malaprabha river at Cholachagudda is under construction.

b) if so, whether it is a fact that the progress of work construction of this barrage is very slow;

c) the steps taken to complete the work

d) when the work will be complited

e) the total area to be irrigated, under the barrage command?

**ಲೋಕೋಪಯೋಗಿ ಸಚಿವ ಶ್ರೀ ಎಚ್.ಎಂ. ಚನ್ನಬಸಪ್ಪ ಅವರ ಉತ್ತರಗಳು**

a) Yes

b) Yes

c) Malaprabha project Authorties hare been requested to release less quantity of surplus water so as not to affect the progress of the work adveraely.

d) As early as possible.

e) 1690 acres

**ಶ್ರೀ ಬಿ.ಎಂ.ಹೊರಕೇರಿ**–ಸ್ವಾಮಿ ಚೊಳಚಗುಡ್ಡದಲ್ಲಿ ಕಾಮಗಾರಿ ನಡೆಯುತ್ತಿದೆ. ಆದರೆ ಅಲ್ಲಿ ಕೆಲಸ ನಡೆಸಲು ಮಲಪ್ರಭಾದಿಂದ ನೀರನ್ನು ಕಡಿಮೆ ಬಿಡುತ್ತಿರುವುದರಿಂದ ಅಲ್ಲಿಂದ ಮುಂದೆ ಇರತಕ್ಕಂಥ ಪ್ರದೇಶದ ಜನರಿಗೆ ಕುಡಿಯಲು ನೀರಿಲ್ಲದ ಹಾಗಾಗಿದೆ. ಇವತ್ತು ದನಕರುಗಳಿಗೂ ಸಹ ನೀರಿಲ್ಲ. ಇದರ ಬಗ್ಗೆ ತಾವು ಏನಾದರೂ ಬೇರೆ ವ್ಯವಸ್ಥೆ ಮಾಡುತ್ತೀರಾ?

**ಶ್ರೀ ಎಚ್.ಎಂ.ಚನ್ನಬಸಪ್ಪ**– ಒಂದು ಕಡೆ ಕೆಲಸ ಆಗಬೇಕು ಎಂದು ಹೇಳುತ್ತೀರಿ. ಮತ್ತೊಂದು ಕಡೆ ನೀರಿಲ್ಲದೆ ತೊಂದರೆಯಾಗುತ್ತಿದೆಂದು ಹೇಳುತ್ತಿದ್ದೀರಿ. ಆದರೆ ಅಲ್ಲಿ ನೀರು ಕಡಿಮೆಯಾಗದ ಹೊರತು ಕೆಲಸ ಕಾರ್ಯಗಳನ್ನು ತೆಗೆದುಕೊಳ್ಳಲಾಗುವುದಿಲ್ಲ. ಆದುದರಿಂದ ಅಲ್ಲಿರತಕ್ಕಂಥ ಜನ ಅನುಸರಿಕೊಂಡು ಹೋಗಲೇಬೇಕಾಗುತ್ತದೆ.

## ಭತ್ಯೆ ವ್ಯತ್ಯಾಸ ಏಕೆ?

25.03.1976

**ಶ್ರೀ ಬಿ.ಎಂ.ಹೊರಕೇರಿ–** ಈ ಪ್ರಾಜೆಕ್ಟ್ ಏರಿಯಾದಲ್ಲಿ ಭತ್ಯೆಗಳನ್ನು ಕೊಡುವಂತ ವಿಚಾರದಲ್ಲಿ ಹಾರ್ಟಿಕಲ್ಚರ್, ಪಿಡಬ್ಲ್ಯೂಡಿ–ರೆವಿನ್ಯೂ ಇವುಗಳಲ್ಲಿ ರೇವಿನ್ಯೂ ಅವರು ಅಖೈರ ಮಾಡುವುದಕ್ಕಾಗಿ ಇರುತ್ತಾರೆ. ಹಾರ್ಟಿಕಲ್ಚರ್ ಡಿಪಾರ್ಟಮೆಂಟಿನವರು ಪ್ರಾಜೆಕ್ಟ್ ಏರಿಯಾದಲ್ಲಿ ಹಾರ್ಟಿಕಲ್ಚರ್ ಡೆವಲಪ್‌ಮೆಂಟ ಮಾಡುವುದಕ್ಕಾಗಿ ಇದ್ದಾರೆ. ಪಿಡಬ್ಲ್ಯೂಡಿ ಕೆಲಸ ಮಾಡುವುದಕ್ಕೆ ಇದೆ. ಅವರ ಹಾಗೆ ಅಗ್ರಿಕಲ್ಚರಲ್ ಡಿಪಾರ್ಟಮೆಂಟ್‌ನವರಿಗೂ ಭತ್ಯೆ ಕೊಡುವುದಕ್ಕೆ ಅವಕಾಶ ಇದೆ. ಮತ್ತೆ ಇದರಲ್ಲಿ ಈ ವ್ಯತ್ಯಾಸ ಏತಕ್ಕೆ?

**ಶ್ರೀ ಎನ್.ಚಿಕ್ಕೆಗೌಡ–** ಅಗ್ರಿಕಲ್ಚರಲ್ ಡಿಪಾರ್ಟಮೆಂಟ್ ಮತ್ತೆ ಯಾವ ಡಿಪಾರ್ಟಮೆಂಟ ಆಗಲೇ ಪ್ರಾಜೆಕ್ಟ ಏರಿಯಾ ಡೆಪನಿಷನ್ ಒಳಗೆ ಇದ್ದರೆ ಕೊಡಬೇಕಾಗುತ್ತದೆ. ಈ ಇಂಡ್ಯೂಜಿವಲ್ ಡಿಪಾರ್ಟಮೆಂಟಗಳ ಕೇಸಸ್‌ಗಳನ್ನು ಗೌರ್‍ನಾಮೆಂಟ ನೋಡಿ ಪರಿಶೀಲನೆ ಮಾಡತಕ್ಕದ್ದು ಇದೆ. ನಾನು ಈಗಾಗಲೇ ಹೇಳಿದ್ದೇನೆ. ಹಾರ್ಟಿಕಲ್ಚರಲ್ ಡಿಪಾರ್ಟಮೆಂಟನವರಿಗೆ ತುಂಗಭದ್ರ ಪ್ರಾಜೆಕ್ಟ ಏರಿಯಾದಲ್ಲಿ ಕೊಡುತ್ತಾ ಇದ್ದಾರೆಂದು ಸರ್ಕಾರಕ್ಕೆ ಗೊತ್ತಾಗಿದೆ. ಇದರ ಬಗ್ಗೆ ಹಣಕಾಸಿನ ಇಲಾಖೆ ಜೊತೆಯಲ್ಲಿ ವ್ಯವಹರಿಸಿ ಅಗ್ರಿಕಲ್ಚರಲ್ ಡಿಪಾರ್ಟಮೆಂಟಿನವರು ಪ್ರಾಜೆಕ್ಟ ಏರಿಯಾದಲ್ಲಿ ಕೆಲಸ ಮಾಡತಕ್ಕವರು ಎಂದು ಶಿಫಾರಸ್ಸು ಮಾಡಿದ್ದೇವೆ. ಹಣಕಾಸಿನ ಇಲಾಖೆಯೊಡನೆ ವ್ಯವಹರಿಸಿ ಇವರಿಗೂ ಭತ್ಯೆ ಕೊಡುವಂತೆ ಒತ್ತಾಯ ಪಡಿಸಿಕೊಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

## ಗೋಮಾಳ ಕುರಿತು

25.06.1976

**ಶ್ರೀ ಬಿ.ಎಂ.ಹೊರಕೇರಿ–** ಸ್ವಾಮಿ ದಿನ ನಿತ್ಯ ದನಗಳನ್ನು ಒಂದೇ ಕಡೆ ಮೇಯಿಸುವುದರಿಂದ ಅಲ್ಲಿ ಸರಿಯಾದ ಮೇವು ಸಿಕ್ಕುವುದಿಲ್ಲ. ಆದ್ದರಿಂದ ಬೇರೆ ಬೇರೆ ಕಂಪಾರ್ಟ್‌ಮೆಂಟ್ ಮಾಡಿ ದಿನ ಒಂದಕ್ಕೆ ಒಂದೊಂದು ಜಾಗ ಕೊಟ್ಟರೆ ಹೆಚ್ಚು ಮೇವು ಮೇಸಲಿಕ್ಕೆ ಸಾಧ್ಯವಾಗುತ್ತದೆ. ಆ ರೀತಿ ಮಾಡುವುದು ಸೂಕ್ತವಲ್ಲವೇ?

## ಲೋಕೋಪಯೋಗಿ ಇಲಾಖೆಯ ಮೇಲಿನ ಚರ್ಚೆ

ಜುಲೈ 1976

**ಶ್ರೀ ಬಿ.ಎಂ. ಹೊರಕೇರಿ**– ಸ್ವಾಮಿ, ಇಬ್ಬರು ಜೂನಿಯರ್ ಇಂಜಿನಿಯರ್ ಮತ್ತು 2,471 ಜನ ಕಾಮಗಾರಿ ನಿರೀಕ್ಷಣಾಧಿಕಾರಿಗಳು ಏನಿದ್ದಾರೆ ಇವರು ಎಷ್ಟು ದಿವಸಗಳವರೆಗೆ ಕೆಲಸ ಮಾಡುತ್ತಿದ್ದಾರೆ? ಮತ್ತು ಇವರಲ್ಲಿ ವಯಸ್ಸು ಮೀರಿರುವವರು ಎಷ್ಟು ಜನರಿದ್ದಾರೆ? ಎನ್ನುವ ಬಗ್ಗೆ ಏನು ಕ್ರಮ ತೆಗೆದುಕೊಳ್ಳುತ್ತೀರಿ?

**ಶ್ರೀ ಎಂ.ಮಲ್ಲಿಕಾರ್ಜುನ ಸ್ವಾಮಿ**– ಇದಕ್ಕೆ ಪ್ರತ್ಯೇಕವಾದ ಪ್ರಶ್ನೆ ಹಾಕಿದಾಗ ಉತ್ತರ ಒದಗಿಸುತ್ತೇವೆ.

**ಶ್ರೀ ಬಿ.ಎಂ.ಹೊರಕೇರಿ**– ಈ ಲೋಕೋಪಯೋಗಿ ಇಲಾಖೆಯ ಎಲ್ಲ ನೌಕರರಿಗೂ ಅನುಕೂಲವನ್ನು ಒದಗಿಸಿಕೊಟ್ಟಿದ್ದೇವೆಂದು ಹೇಳಿದ್ದೀರಿ. ಅದರಂತೆ ಕೇಡರ್ ಮತ್ತು ರಿಕ್ರೂಟ್‌ಮೆಂಟ್ಸ್ ಏನಾದರೂ ಬದಲಾವಣೆ ಮಾಡುತ್ತೀರಾ?

**ಶ್ರೀ ಎಂ.ಮಲ್ಲಿಕಾರ್ಜುನ ಸ್ವಾಮಿ**– ಆ ರೀತಿ ಪ್ರಾವಿಷನ್ ಎಲ್ಲೂ ಇಲ್ಲ ಲೋಕೋಪಯೋಗಿ ಇಲಾಖೆಯಲ್ಲಿ ಯಾವ ಸಂಹಿತೆಗಳಿವೆಯೋ ಅದರ ಕೆಳಗೆ ಅವರನ್ನು ನಾವು ನೇಮಕ ಮಾಡಿಕೊಂಡಿದ್ದು 1964ರಲ್ಲಿ 1970ರಲ್ಲಿ ಮತ್ತು ಏನೇನು ಹೊಸ ವೇತನ ಶ್ರೇಣಿಯನ್ನು ಕೊಡಬೇಕಾಗಿತ್ತೊ ಅದರಂತೆ ಕೊಡುತ್ತಾ ಬಂದಿದ್ದೇವೆ. ಇದರ ಜೊತೆಗೆ ನಾನ್ ಟೀಚರ್ ಜಾಬ್ಸ್ ಅನ್ನು ಸೇರಿಸಿದ್ದೇವೆ. ಇಷ್ಟಲ್ಲದೆ ನಾಲ್ಕನೇ ದರ್ಜೆ ನೌಕರರಿಗೆ ಪರ್ಮನಂಟ್ ಪ್ರೊಮೋಷನ್ ಕೊಡುವುದಕ್ಕೆ ಕೂಡಾ ಅವಕಾಶ ಮಾಡಿಕೊಟ್ಟಿದ್ದೇವೆ.

* * * * *

## ಏಕೋಪಾಧ್ಯಾಯ ಪ್ರಾಥಮಿಕ ಶಾಲಾ ಶಿಕ್ಷಕರು

08.11.1976

ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು

a) Whether it is not a fact that there are number of primary schools in remoted part of rural areas in the state having single teacher;

b) if so, whether any arragnament has made in such single teacher's school for posting reserve posts of teacher when the single teacher proceeds on leave for more than a week;

c) if not, the arrangement made for teaching in such primary schools during the leave period of these single teacher?

ಶಿಕ್ಷಣ ಮಂತ್ರಿ ಶ್ರೀ ಮಲ್ಲಿಕಾರ್ಜುನನ ಖರ್ಗೆ ಅವರ ಉತ್ತರಗಳು

a) Yes

b) there is no provision for posting such leave reserve.

c) A teacher from noarmy multi teacher school is deputed to run the school wherever a teacher of a single teacher school proceeds to leave for more than a week.

**ಶ್ರೀ ಬಿ.ಎಂ.ಹೊರಕೇರಿ**–ತಾವು ತಮ್ಮ ಉತ್ತರದಲ್ಲಿ ಉಪಾಧ್ಯಾಯರು ಒಂದು ವಾರಕ್ಕಿಂತ ಹೆಚ್ಚು ರಜವನ್ನು ತೆಗೆದುಕೊಂಡರೆ ಬೇರೆಯುವರನ್ನು ಹಾಕುವ ವ್ಯಸ್ಥೆಯನ್ನು ಮಾಡಲಾಗಿದೆಯೇ ಎಂದು ಕೇಳಿದ್ದಕ್ಕೆ ಅದಕ್ಕೆ ಅವಕಾಶ ವಿರುವುದಿಲ್ಲವೆಂದು ಹೇಳಿದ್ದೀರಿ. ಆದರೆ ಬೇರೆ ಮಲ್ಟಿಟೀಚರ್ಸ್ ಇರುವ ಕಡೆಯಿಂದ ಕಳುಹಿಸುವ ಏರ್ಪಾಡು ಇದೆ ಎಂದು ಹೇಳುತ್ತೀರಿ. ಆ ರೀತಿ ಮಾಡಿದರೆ ಆ ಸ್ಕೂಲುಗಳಿಗೆ ತೊಂದರೆಯಾಗುವುದಿಲ್ಲವೇ?

**ಶ್ರೀ ಮಲ್ಲಿಕಾರ್ಜುನ ಖರ್ಗೆ**–ಒಂದು ವಾರಕ್ಕಿಂತಲೂ ಹೆಚ್ಚಿಗೆ ಉಪಾಧ್ಯಾಯರು ರಜೆಯ ಮೇಲೆ ಹೋದರೆ ರಿಮೋಟ್ ಸ್ಕೂಲ್‌ಗಳು ಮತ್ತು ಕಾರ್ನ್‌ರನಲ್ಲಿರುವ ಸ್ಕೂಲುಗಳು ಸಫರ್ ಆಗಬಾರದು. ಅದು ಮಲ್ಟಿ ಟೀಚರ್ ಇರುವ ಕಡೆಯಿಂದ ಇಂತಹ ಸ್ಕೂಲಗಳಿಗೆ ಕಳುಹಿಸಿಕೊಡುತ್ತಾರೆ. ಇದನ್ನು ಬಿಟ್ಟು ಬೇರೆ ಯಾವ ದೃಷ್ಟಿಯಿಂದಲೂ ಅಲ್ಲ.

**ಶ್ರೀ ಬಿ.ಎಂ.ಹೊರಕೇರಿ**–ವಿಜಾಪುರ ಜಿಲ್ಲೆಯಲ್ಲಿ ಹೆಚ್ಚಿನ ಶಿಕ್ಷಕರು ತಾಲೂಕಿನ ಮುಂದುವರೆದ ನಗರಗಳಲ್ಲಿ ದೊಡ್ಡ ದೊಡ್ಡ ಗ್ರಾಮಗಳಲ್ಲಿ ಸರ್‌ಪ್ಲೆಸ್ ಶಿಕ್ಷಕರು ಇದ್ದರೆ ಈ ರಜದ ಅವಧಿಯಲ್ಲಿ ಅವರನ್ನು ಉಪಾಧ್ಯಾಯರು ಇರುವ ಕಡೆಗೆ ಹಾಕಲು ಅವಕಾಶ ಕೊಡುತ್ತೀರಾ.

## ಬಾದಾಮಿ ಹಾಗೂ ಹುನಗುಂದ ಕೈಪಂಪುಗಳ ಕುರಿತು

12.11.1976

**ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು**

1973–74 ಹಾಗೂ 1975–76 ರಲ್ಲಿ ಎಷ್ಟು ಕೈಪಂಪುಗಳನ್ನು ಹಾಕಿಸಲಾಗಿದೆ?

**ಶ್ರೀ ಕೆ. ಪ್ರಭಾಕರ ಗ್ರಾಮೀಣ ಅಭಿವೃದ್ಧಿ ಮಂತ್ರಿಗಳ ಉತ್ತರ**

a)–

1973–74ರಲ್ಲಿ ಇಲ್ಲ 1975-76ರಲ್ಲಿ -20

| B) ಹಳ್ಳಿಗಳ ಹೆಸರು | | | ಬಾವಿಗಳ ಸಂಖ್ಯೆ |
|---|---|---|---|
| ಹುನಗುಂದ ತಾಲ್ಲೂಕು | | | |
| 1. ಹೆಗದಾಳ್ | ... | ... | 1 |
| 2. ರಾಮವಾಡಿಗಿ | ... | ... | 1 |
| 3. ಧನ್ನೂರ್ | ... | ... | 3 |
| 4. ಹೆಮ್ಮಿಹಟ್ಟಿ | ... | ... | 1 |
| 5. ಆದಿಹಾಳ್ | ... | ... | 1 |
| 6. ಮದನಪುರ್ | ... | ... | 1 |
| 7. ಬಾಲಕುಂದಿ | ... | ... | 1 |
| 8. ಬಾಲಕುಂದಿ L.T. | ... | ... | 1 |
| 9. ಕಾಜಗಿಲ್ | ... | ... | 1 |
| 10. ಚಮಲ್‌ಪುರ್ | ... | ... | 1 |
| 11. ಹರನಪುರ್ | ... | ... | 1 |
| 12. ಮಾರ್ತಗೇರಿ | ... | ... | 1 |
| 13. ಚಿಕ್ಕೋಗಲಗಿ | ... | ... | 1 |
| 14. ಸಬಕಲಾಪುರ | ... | ... | 1 |

| | | | |
|---|---|---|---|
| 15. ಗೂಡೂರ್ S.B. | ... | ... | 1 |
| 16. ಕೊಪ್ಪ S.M. | ... | ... | 1 |
| 17. ಹಾವರಗಿ | ... | ... | 1 |
| 18. ಕಾಮದತ್ತಿ | ... | ... | 1 |
| | ... | ... | **20** |

ಬಾದಾಮಿ ತಾಲ್ಲೂಕ್

ಇಲ್ಲ.

ಶ್ರೀ **ಬಿ.ಎಂ.ಹೊರಕೇರಿ**–ನನ್ನ ಮೊದಲನೇ ಪ್ರಶ್ನೆಗೆ ಬಾದಾಮಿ ತಾಲ್ಲೂಕಿನಲ್ಲಿ ಕೊಳವೆ ಭಾವಿಗಳನ್ನು ಒಂದೂ ತೆಗೆದಿಲ್ಲ ಎಂದು ಉತ್ತರದಲ್ಲಿ ಹೇಳಿದೆ. ಬಜಣಗಿ ಮುಂತಾದ ಗ್ರಾಮಗಳಲ್ಲಿ ಅದು ಏಕೆ ಈ ಯಾದಿಯಲ್ಲಿ ಬರಲಿಲ್ಲ?

ಶ್ರೀ **ಕೆ.ಪ್ರಭಾಕರ್**–ಆ ಸಮಾಚಾರ ನನ್ನ ಹತ್ತಿರ ಇಲ್ಲ. ಒಂದು ವೇಳೆ ಹಿಂದೆ ತೆಗೆದದ್ದು ಇರಬಹುದು. ನೀವು ಕೇಳಿದ ಅವಧಿಯಲ್ಲಿ ತೆಗೆದಿಲ್ಲ. ಆದುದರಿಂದ ತೆಗೆದಿಲ್ಲ ಎಂದು ಉತ್ತರ ಕೊಟ್ಟಿದ್ದೆ.

ಶ್ರೀ **ಬಿ.ಎಂ.ಹೊರಕೇರಿ** –ಬಾದಾಮಿ ತಾಲೂಕಿನ ಢಾಣಕಶಿರೂರು ಹಾಗೂ ಮಣ್ಣೇರಿ ಮಾತ್ರ ಉಪ್ಪು ನೀರಿನ ಪ್ರಾಂತ್ಯದಲ್ಲಿ ಬರುತ್ತವೆ, ಬಾದಾಮಿ ತಾಲೂಕಿನ ಢಾಣಕಶಿರೂರು ಹಾಗೂ ಮಣ್ಣೇರಿ ಗ್ರಾಮಗಳಲ್ಲಿ ಕೊಳವೆ ಬಾವಿಗಳನ್ನು ಕೊರೆಯುವ ಮೂಲಕ ಸಿಹಿ ನೀರು ದೊರಕುವ ಸಾಧ್ಯತೆ ಬಗ್ಗೆ ಪರೀಕ್ಷಿಸಬೇಕೆಂದು ಸಂಬಂಧಪಟ್ಟ ಸೂಪರಿಂಟೆಂಡಿಂಗ್ ಇಂಜಿನಿಯರವರು ಗಣಿ ಹಾಗೂ ಭೂಗರ್ಭ ಇಲಾಖೆಯ ಸಂಚಾಲಕರನ್ನು ಕೇಳಿಕೊಂಡಿದ್ದಾರೆ ಎಂದು ಹೇಳಿದ್ದೀರಿ. ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆಯಲ್ಲಿ ಇವೆರಡು ಗ್ರಾಮಗಳನ್ನು ಸೇರಿಸಿ ಆ ಮೂಲಕ ಕೆಲಸಗಳನ್ನು ತೆಗೆದುಕೊಳ್ಳುತ್ತೀರಾ?

ಶ್ರೀ **ಕೆ. ಪ್ರಭಾಕರ್**– ತಜ್ಞರನ್ನು ಕೇಳಿ ಇದನ್ನು ಮಾಡಬೇಕಾಗುತ್ತದೆ.

ಶ್ರೀ **ಬಿ.ಎಂ.ಹೊರಕೇರಿ**–ಈ ಕೆಲಸವನ್ನು ತೆಗೆದುಕೊಳ್ಳುವುದಕ್ಕೆ ಮುಂಚೆ ಬೇರೆ ಮಾರ್ಗ ಏನಿದೆಯೆಂಬುದನ್ನು ನೋಡಬೇಕು ಸಂಬಂಧಪಟ್ಟ ಇಲಾಖೆಯ ತಜ್ಞರನ್ನು ಕೇಳಿ. ಇಲ್ಲದೇ ಇದ್ದರೆ ಆ ರೀತಿ ಇಲ್ಲಿ ಮಾಡುವುದಕ್ಕೆ ಸಾಧ್ಯವಿಲ್ಲ ನೀರು ಕೊಡುವುದಕ್ಕೆ ಸಾಧ್ಯವಿಲ್ಲವೆಂದು ಹೇಳಿದರೆ ಹೇಗೆ? ಅಲ್ಲಿಗೆ ತಕ್ಕ

ವ್ಯವಸ್ಥೆಯನ್ನು ಮಾಡಬೇಕು. ಅವರ ಅಭಿಪ್ರಾಯ ಬಂದಮೇಲೆ ಅವರು ಹೇಳಿದ ಪ್ರಕಾರ ಒಳ್ಳೆಯ ನೀರು ಸಿಕ್ಕಿದರೆ ಅದನ್ನು ಮಾಡಿಸಬೇಕು. ಬೇರೆ ಮಾರ್ಗವಿಲ್ಲವೆಂದು ಹೇಳಿದರೆ ಹೇಗೆ? ನೀವು ಹೇಳುವುದು ಸರಿಯಾದ ಮಾರ್ಗವಲ್ಲವೆಂದು ನಾನು ಭಾವಿಸುತ್ತೇನೆ.

ಶ್ರೀ **ಕೆ.ಪ್ರಭಾಕರ್**–ಮಲಪ್ರಭಾ ನದಿಯು ಅಲ್ಲಿ ಹರಿಯುತ್ತಿದೆ ಆದರೆ ಮಳೆಗಾಲದಲ್ಲಿ ಅಲ್ಲಿನ ಜನರಿಗೆ ಅಲ್ಲಿನ ನೀರು ಉಪ್ಪುಪ್ಪಾಗಿರುವ ನೀರು ಮಾತ್ರ ದೊರೆಯುವುದರಿಂದ ಆ ಕಡೆ ಒಳ್ಳೆಯ ಕುಡಿಯುವ ನೀರು ಬರುವುದೇ ತೊಂದರೆಯಾಗುತ್ತಿದೆ. ಅದರಿಂದಾಗಿ ಜನರು ಅಲ್ಲಿ ಕೊಚ್ಚೆ ನೀರು ಕುಡಿಯುವ ಪರಿಸ್ಥಿತಿ ಬಂದಿದೆ. ಆದ್ದರಿಂದ ಅದರ ಬಗ್ಗೆ ಸೂಕ್ತ ಕ್ರಮವನ್ನು ತೆಗೆದುಕೊಳ್ಳಲಾಗುತ್ತದೆ.

ಶ್ರೀ **ಬಿ.ಎಂ.ಹೊರಕೇರಿ**–ಆ ವಿಚಾರದಲ್ಲಿ ಸರ್ಕಾರದವರು ನಮ್ಮ ಸಲಹೆಯನ್ನು ವಿಚಾರ ಮಾಡಬೇಕು. ಅದರ ಬಗ್ಗೆ ಇಲಾಖೆಯುವರ ಹಾಗೂ ತಜ್ಞರ ಅಭಿಪ್ರಾಯ ಪಡೆಯಬೇಕಾದುದು ಸರ್ಕಾರದ ಜವಾಬ್ದಾರಿಯಲ್ಲವೇ?

ಶ್ರೀ **ಕೆ.ಪ್ರಭಾಕರನ್**–ಇಲಾಖೆಯವರ ಅಭಿಪ್ರಾಯ ಪಡೆಯುವುದಕ್ಕೆ ಎರಡು ಮಾರ್ಗಗಳಿವೆ. ಅದರಲ್ಲಿ ಯಾರದು ಸೂಕ್ತವೋ ಅದನ್ನು ಮಾಡಲಾಗುತ್ತದೆ. ವಂಡು ನೀರು ಕುಡಿಯುತ್ತಾರೆಂಬುದಾಗಿ ನನಗೆ ತಿಳಿದುಬಂದಿದೆ, ಅದನ್ನು ಜಾಗ್ರತೆಯಾಗಿ ತಪ್ಪಿಸಬೇಕೆಂಬುದೇ ಸರ್ಕಾರದ ಉದ್ದೇಶ.

*  *  *  *  *

# ಕೃಷಿ ಇಲಾಖೆಯ ನೇಮಕಾತಿ ನಿಯಮಗಳು

16.11.1976

## ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು

(a) Whether any changes, revisions or amendments to the Cadre and Recruitment Rules have been made recently in the Cadres of Agricultural Assistants/Field Assistants or Gramasevaks of the Department of Agriculture;

(b) if so, the details of the Amendments made;

(c) in the amendments made whether there is any devision from the recommendation of the Narayan Pai Pay Commission to make a combined single cadre for Agricultural Assistants/Field Assistants/ Gramasevaks;

(d) if so why?

## ಶ್ರೀ ಎಸ್. ಚಿಕ್ಕೇಗೌಡ (ಕೃಷಿ ಮಂತ್ರಿಗಳ ಉತ್ತರ)

(a) Yes.

(b) The details are as appended.

(c) and (d). Yes, only the Agricultural Assistants and Gramasevaks have been merged as they had similar qualification and training. It is not proposed to recruit Field Assistants in future. The proposal to train all existing Field Assistants is not practicable.

**Extract from No. AF 39 ADO 72(ii)**
**Dated 18th august 1976**

| Sl.No. | Category of posts | No.of posts Permanent Temporary | Qualification: Scale of pay |
|---|---|---|---|
| 49. | Agricultural Assistant | Fifty percent by Direct Recuritment | For direct recruitment must have passed S.S.L.C examination or equilent qualification. |
| | | Fifty percent by Promotion from the Cadre of Field Assistants. | Note: A selected candidate should be appointed succesafully complete two years pre-service training course at one of the RDTCs. The condition of training. stipend if any payable during training shall be such as may from time to time, be specified by the Government. For promotion: Must have completed two years training in one of the RDTs. Field Assistant shall be sent for training in order of seniority |
| 51.Field Assistant | | ... | ... |

**ಶ್ರೀ ಬಿ.ಎಂ.ಹೊರಕೇರಿ**–ಸ್ವಾಮಿ "ಇ" ಪ್ರಶ್ನೆಗೆ ಉತ್ತರ ಕೊಡುತ್ತಾ "ಒಂದೇ ರೀತಿಯ ವಿದ್ಯಾರ್ಹತೆ ಹಾಗೂ ತರಬೇತಿ ಹೊಂದಿರುವುದರಿಂದ ಕೃಷಿ ಸಹಾಯಕ ಹಾಗೂ ಗ್ರಾಮಸೇವಕರ ಹುದ್ದೆಗಳನ್ನು ಒಟ್ಟುಗೂಡಿಸಲಾಗಿದೆ. ಇನ್ನು ಮುಂದೆ ಕ್ಷೇತ್ರ ಸಹಾಯಕರನ್ನು ನೇಮಿಸುವ ಉದ್ದೇಶವಿಲ್ಲ; ಈಗಿರುವ ಎಲ್ಲ ಕ್ಷೇತ್ರ ಸಹಾಯಕರಿಗೆ ತರಬೇತಿ ನೀಡುವ ಸಲಹೆಯು ಸೂಕ್ತವಾಗಿಲ್ಲ" ಎಂದು ಉತ್ತರವನ್ನು ಕೊಟ್ಟಿದ್ದೀರಿ. ಹಾಗಿದ್ದರೆ ಅಗ್ರಿಕಲ್ಚರಲ್ ಅಸಿಸ್ಟೆಂಟ್ ಮತ್ತು ಗ್ರಾಮಸೇವಕರಿಗೆ ಯಾವ ಯಾವ ವಿದ್ಯಾರ್ಹತೆ ಇರಬೇಕು, ತರಬೇತಿ ಇರಬೇಕು ಎಂಬುದನ್ನು ತಿಳಿಸುತ್ತೀರಾ ಸ್ವಾಮಿ

**ಶ್ರೀ ಎನ್. ಚಿಕ್ಕೇಗೌಡ**–ಹಿಂದೆ ಫೀಲ್ಡ್ ಅಸಿಸ್ಟೆಂಟ್ಸ್‌ಗೆ ಆರ್. ಡಿ.ಟಿ.ಸಿ. ಟ್ರೈನಿಂಗ್ ಕೊಡುತ್ತಿದ್ದರು. ಇತ್ತೀಚಿನ ತಿದ್ದುಪಡಿ ಮಾಡಿದ ನಿಯಮಗಳ ಪ್ರಕಾರ 2 ವರ್ಷ ಟ್ರೈನಿಂಗ್ ಆಗಿರಬೇಕು. ಇದರಲ್ಲಿ ಪ್ರೊಮೋಷನ್ ಕೊಡುವಾಗ 50 ಪರ್ಸೆಂಟ್ ಪ್ರೊಮೋಷನ್ ಮೂಲಕ ತುಂಬುವುದು, ಇನ್ನುಳಿದ 50 ಪರ್ಸೆಂಟ್ ಡೈರಕ್ಟ್ ರಿಕ್ರೂಟ್‌ಮೆಂಟ್ ಮುಖಾಂತರ ತುಂಬುವುದು ಎಂದು ಮಾಡಿದ್ದೇವೆ.

**ಶ್ರೀ ಬಿ.ಎಂ. ಹೊರಕೇರಿ**– ಫೀಲ್ಡ್ ಅಸಿಸ್ಟೆಂಟ್ಸ್‌ನ ವಿದ್ಯಾರ್ಹತೆ ಏನು ಸ್ವಾಮಿ!

**ಶ್ರೀ ಎನ್. ಚಿಕ್ಕೇಗೌಡ**–ಫೀಲ್ಡ್ ಅಸಿಸ್ಟೆಂಟ್‌ನ ವಿದ್ಯಾರ್ಹತೆ ಎಸ್.ಎಸ್.ಎಲ್.ಸಿ ಅಥವಾ ಅಥವಾ ನಾನ್ ಎಸ್.ಎಸ್.ಎಲ್.ಸಿ. ತರಬೇತಿ 6 ತಿಂಗಳ ಕಾಲ.

**ಶ್ರೀ ಬಿ.ಎಂ. ಹೊರಕೇರಿ**–ಸ್ವಾಮಿ ಫೀಲ್ಡ್ ಅಸಿಸ್ಟೆಂಟ್ ನಾನ್ ಎಸ್.ಎಸ್.ಎಲ್.ಸಿ ಎಂದು ಹೇಳುತ್ತೀರಿ ನಮಗೆ ಗೊತ್ತಿರುವಂತೆ ಬೊಂಬಾಯಿ ಸರ್ಕಾರದಿಂದ ಬಂದಿರುವವರು ಈಗ ರಿಟೈರ್ಡ್ ಆಗಿದ್ದಾರೆ, ಸರ್ವೀಸ್‌ನಲ್ಲಿ ಯಾರೂ ಇಲ್ಲ.

**ಶ್ರೀ ಎನ್. ಚಿಕ್ಕೇಗೌಡ**–ಈ ಫೀಲ್ಡ್ ಅಸಿಸ್ಟೆಂಟ್ಸ್ ಇನ್ನೂ 4 ಸಾವಿರ ಜನ ಇದ್ದಾರೆ.

* * * * *

## ದೈಹಿಕ ಶಿಕ್ಷಕರ ವೇತನ ಶ್ರೇಣಿ

17.11.1976

**ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು**

(a) whether the Physical Culture Instructors, working in College who were drawing UGC Scales of pay of 1966 have not been granted pay scales of 1970

(b) whether Government is aware that the Lecturers who were drawing UGC Scales of pay of 1956 have been granted pay scales of 1970 (300-700)l

(c) if so, the reasons why the Physical Culture Instructors have been left out;

(d) whether Government had decided while implementing 1966 UGC Scales, to treat the physical Culture Instructors on par with the Lecturers;

(e) whether UGC has/had recommended better scales of pay to the Physical Culture Instructors?

**ಶ್ರೀ ಎಸ್.ಎಂ. ಯಾಹ್ಯಾ (ಶಿಕ್ಷಣ ಮತ್ತು ಅಬಕಾರಿ ಮಂತ್ರಿಗಳ ಉತ್ತರ)**

(a) The Physical Culture Instructors working in the Colleges, who were drawing the UGC Scales of Pay of 1966, have already been granted the new pay scales of 1970.

(b) Yes

(c) Does not arise in view of the reply to question (a).

(d) No

(e) Higher in some grades and lower in others

**ಶ್ರೀ ಬಿ.ಎಂ. ಹೊರಕೇರಿ**–ಸ್ವಾಮಿ, ಈಗ ದೈಹಿಕ ಶಿಕ್ಷಣ ನೀಡುವ ಶಿಕ್ಷಕರಿಗೆ ಕೆಲವು ದರ್ಜೆಗಳಿಗೆ ಕಡಿಮೆ ಪಗಾರ ಕೊಟ್ಟು, ಕೆಲವು ದರ್ಜೆಗಳಿಗೆ ಹೆಚ್ಚು ಪಗಾರ ಕೊಡುವುದಕ್ಕೆ ತೀರ್ಮಾನಿಸಿದ್ದಾರೆ ಈ ವ್ಯತ್ಯಾಸ ಏತಕ್ಕೆ ಎಂದು ಹೇಳುತ್ತಾರೆ.

**ಶ್ರೀ ಎಸ್.ಎಂ. ಯಾಹ್ಯಾ**– ಈಗ ಫಿಸಿಕಲ್ ಕಲ್ಚರ್ ಇನಸ್ಟ್ರಕ್ಟ್‌ರ್ಸ್‌ನಲ್ಲಿ ಕ್ವಾಲಿಫಿಕೇಷನ್ ತೆಗೆದುಕೊಂಡರೆ ಅದರಲ್ಲಿ ಹೆಚ್ಚಾಗಿ ಇರುವುದು ನಾನ್ ಮೆಟ್ರಿಕ್ಯುಲೇಷನ್‌ನವರು ಈಗ ಇರತಕ್ಕವರು ಎಸ್.ಎಸ್.ಎಲ್.ಸಿ. ಪಾಸಾದವರು, ಇದರಲ್ಲಿ ಡಿಪ್ಲೋಮ ಇದೆ, ಪೋಸ್ಟ್ ಗ್ರಾಜ್ಯುಯೇಟ್ ಡಿಪ್ಲೋಮ ಇದೆ, ಈ ರೀತಿ ಇರುವುದರಿಂದ ಮೂರು ನಾಲ್ಕು ಕ್ಯಾಟಗರಿ ಮಾಡಿ ಪೇ ಕೊಡಬೇಕಾಗುತ್ತದೆ, ಅಲ್ಲದೇ ಪೇ ನಿರ್ಧಾರ ಮಾಡುವಾಗ ಜವಾಬ್ದಾರಿ ನೋಡಿ ಮಾಡಬೇಕಾಗುತ್ತದೆ.

**ಶ್ರೀ ಬಿ.ಎಂ. ಹೊರಕೇರಿ**–ಹೈಸ್ಕೂಲಿನಲ್ಲಿ ಇರತಕ್ಕವರಿಗೂ ಈ ವೇತನವನ್ನು ಕೊಡಲಿಕ್ಕೆ ಬರುತ್ತದೆಯೇ?

**ಶ್ರೀ ಎಸ್.ಎಂ. ಯಾಹ್ಯಾ**–ಈಗ ಸರ್ಕಾರಿ ಹೈಸ್ಕೂಲಿನಲ್ಲೂ ಇದೆ. ಎಲ್ಲದಕ್ಕು 1970 ಪೇ ಸ್ಕೇಲ್ ಕೊಡುತ್ತೇವೆ ಎಂದು ಹೇಳುವುದಕ್ಕಾಗುವುದಿಲ್ಲ.

* * * * *

## ತಾಲ್ಲೂಕಾ ಅಭಿವೃದ್ಧಿ ಮಂಡಳದ ಆದಾಯ

17.11.1976

### ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು

(a) Whether it is not a fact that the main sources of income of the Taluk Development Boards have been minimized due to the implementation of Land Reforms Act, as the registration of land transaction have almost stopped

(b) if so, the arrangements made for subsidizing the income of Taluk Development Boards.

(c) whether it is a fact that Taluk Development Boards have to construct roads in the rural areas.

(d) whether there is any proposal to grant the amount collected out of the taxes levied at 1% by the APMCs from the sales of Agricultural Produces in the market areas?

### ಶ್ರೀ ಕೆ. ಪ್ರಭಾಕರ್ (ಗ್ರಾಮೀಣ ಆಭಿವೃದ್ಧಿ ಮತ್ತು ಪಂಚಾಯತ್ ರಾಜ್)

(a) No

(b) Does not arise in view of reply at (a) above,

(c) Yes.

(d) No.

**ಶ್ರೀ ಬಿ.ಎಂ. ಹೊರಕೇರಿ–** ಸ್ವಾಮಿ, "ಭೂ ಸುಧಾರಣ ಶಾಸನ ಜಾರಿಗೊಳಿಸುವುದರಿಂದ ಹಾಗೂ ಭೂ ವ್ಯವಹಾರಗಳ ನೋಂದಣಿಗೊಳಿಸಿರುವುದರಿಂದಾಗಿ ತಾಲ್ಲೂಕು ಅಭಿವೃದ್ಧಿ ಮಂಡಲಿಗಳ ಆದಾಯುದ ಪ್ರಮುಖ ಮೂಲಗಳು ಕಡಿಮೆಯಾಗಿರುವುದು ನಿಜವಲ್ಲವೆ" ಎಂದು ಕೇಳಿದ್ದಕ್ಕೆ ಅಲ್ಲ ಎಂದು ತಾವು ಉತ್ತರವನ್ನು ಕೊಟ್ಟಿದ್ದೀರಿ. ಈ ಭೂ ಸುಧಾರಣಾ ಶಾಸನ ಜಾರಿಗೆ ಬಂದ ಮೇಲೆ ರಾಜ್ಯದ ಎಲ್ಲ ಕಡೆಗಳಿಂದಲೂ

ಅಂಕಿಸಂಖ್ಯೆಗಳನ್ನು ತರಿಸಿಕೊಂಡು ಈ ಉತ್ತರವನ್ನು ಹೇಳುತ್ತಿದ್ದೀರಾ, ಇಲ್ಲ ಹಾಗೇ ಹೇಳುತ್ತಿದ್ದೀರಾ ಏಕೆಂದರೆ ಈ ಲ್ಯಾಂಡ ರೀ ಫಾರಂಸ್ ಜಾರಿಗೆ ಬಂದಮೇಲೆ ತಾಲ್ಲೂಕು ಅಭಿವೃದ್ಧಿ ಮಂಡಲಿಗಳ ಆದಾಯ ಕಡಿಮೆಯಾಗಿದೆ ಎಂದು ನಾನು ಕೇಳಿದ್ದೇನೆ.

**ಶ್ರೀ ಕೆ. ಪ್ರಭಾಕರ್.**– ಕೊಂಚಮಟ್ಟಿಗೆ ಆದಾಯ ಕಡಿಮೆಯಾಗುತ್ತದೆ. ಆದರೂ ಕೂಡ ಈ ಸಾರಿ ರಿಜಿಸ್ಟ್ರೇಷನ್ ಯಾವು ಯಾವುದು ಆಗುತ್ತದೆ ಅದು ಮತ್ತೆ ಮುಂದೆ ಬರುವುದಕ್ಕೂ ಸೇರಿಸಿ ಆದಾಯ ಬರುತ್ತದೆ. ಆದರೆ ಆದಾಯ ಮಾತ್ರ ಕುಗ್ಗುವುದಿಲ್ಲ ಎಂದು ಹೇಳುತ್ತೇನೆ.

**ಶ್ರೀ ಬಿ.ಎಂ. ಹೊರಕೇರಿ.**– ಸ್ವಾಮಿ, ನನ್ನ ಮುಂದಿನ ಪ್ರಶ್ನೆಯಲ್ಲಿ 'ತಾಲ್ಲೂಕು ಅಭಿವೃದ್ಧಿ ಮಂಡಲಿಯವರು ಗ್ರಾಮಾಂತರ ಪ್ರದೇಶಗಳಲ್ಲಿ ರಸ್ತೆಗಳನ್ನು ನಿರ್ಮಿಸುತ್ತಿರುವುದು ನಿಜವೆ ಎಂದು ಕೇಳಿರುವುದಕ್ಕೆ ತಾವು ನಿಜ! ಎಂದು ಉತ್ತರವನ್ನು ಕೊಟ್ಟಿದ್ದೀರಿ ಮತ್ತು "ಈ ಪ್ರಶ್ನೆಯಲ್ಲಿ ಮಾರುಕಟ್ಟೆ ಪ್ರದೇಶಗಳಲ್ಲಿ ವ್ಯವಸಾಯೋತ್ಪನ್ನ ಮಾರಾಟದಿಂದ ವ್ಯವಸಾಯ ಉತ್ಪನ್ನ ಮಾರುಕಟ್ಟೆ ಸಹಕಾರ ಸಂಘದವರು ಶೇಕಡ 1ರಷ್ಟು ಮೊಬಲಗನ್ನು ವಿಧಿಸಿ ತೆರಿಗೆಗಳಲ್ಲಿ ವಸೂಲ್ಮಾಡಿದ ಮೊಬಲಗಿನ ಹಣವನ್ನು ಮಂಜೂರು ಮಾಡುವ ಸಲಹೆ ಏನಾದರೂ ಇದೆಯೆ ಎಂದು ಕೇಳಿದರೆ "ಇಲ್ಲ" ಎಂದು ಉತ್ತರವನ್ನು ಕೊಟ್ಟಿದ್ದೀರಿ. ಗ್ರಾಮಾಂತರ ಪ್ರದೇಶಗಳಲ್ಲಿ ವ್ಯವಸಾಯೋತ್ಪನ್ನ ಸಾಮಾನುಗಳನ್ನು ಸಾಗಣೆ ಮಾಡಬೇಕಾದರೆ ಮಾರ್ಕೆಟ್ ರೋಡ್ಸ್ ಆಗಬೇಕು, ಇದಕ್ಕೆ ಹಣವನ್ನು ಎಲ್ಲಿಂದ ತರುತ್ತೀರಿ?

**ಶ್ರೀ ಕೆ. ಪ್ರಭಾಕರ.**–ಮಾರ್ಕೆಟ್ ಕಮಿಟಿಯವರು ಸ್ಟೇಟ್ ರೋಡ್ ಫಂಡ್‌ಗೆ ಎಂದು ಹಣವನ್ನು ಕೊಡುತ್ತಾರೆ. ಆದರೆ ತಾಲ್ಲೂಕು ಬೋರ್ಡ್‌ಗೆ ನೇರವಾಗಿ ದುಡ್ಡನ್ನು ಕೊಡುವುದಿಲ್ಲ ಎಂದು ಹೇಳಿದ್ದೇವೆ.

**ಶ್ರೀ ಬಿ.ಎಂ. ಹೊರಕೇರಿ.**–ಸ್ವಾಮಿ, ಗ್ರಾಮಾಂತರ ಪ್ರದೇಶಗಳಲ್ಲಿ ಸಣ್ಣ ರಸ್ತೆಗಳನ್ನು ಅಂದರೆ ಮಾರ್ಕೆಟ್ ರಸ್ತೆಗಳನ್ನು ಒಕ್ಕಲುತನದವರು ಕೊಟ್ಟ ಸೆಸ್‌ನಿಂದ ರಸ್ತೆಗಳನ್ನು ಮಾಡುವುದಕ್ಕಾಗುವುದಿಲ್ಲ ಎಂದರೆ ಇನ್ನು ಯಾವುದರಿಂದ ನೀವು ಮಾಡುತ್ತೀರಿ? ಏಜೆನ್ಸಿಗಳಿಂದ ಏನಾದರೂ ಮಾಡಿಸುತ್ತೀರಾ?

**ಶ್ರೀ ಕೆ. ಪ್ರಭಾಕರ್.**–ತಾವು ಹೇಳುತ್ತಿರುವುದು ಸರಿ, ಅದು ಆಗುತ್ತಿರುವುದೂ ಸರಿ.

# ಹುನಗುಂದ ತಾಲ್ಲೂಕಿನ ಮಾರುಕಟ್ಟೆ ರಸ್ತೆ ಕೆಲಸ

06.03.1977

ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು

(a) whether the Agricultural Produce Market Commitee in the State are collecting taxes from the farmers for the sale of agricultural produces in the respective markets of the Agricultural produce Market Committee:

(b) if so, whether there is any proposal to utilize the amount collected for improvement and construction of the market roads in the interior and removes village for transporting the agricultural produces to the market throughout the year:

(c) whether the amount collected is utilized in the respective areas of collection on construction of market roads:

(d) the amount of taxes so far collected in Badami and Hungund Taluks and the amount allotted for construction, repairs and maintenance of market roads in those areas since the introduction of the Act?

ಶ್ರೀ ಆರ್.ಡಿ. ಕಿತ್ತೂರು **(Minister of State for Regulated Markets.-**

(a) Fees are being collected.

(b) Yes.

(c) Not necessary.

(d) 1) Amount collected:

| | | |
|---|---|---|
| a) Badami Tq. | ... | Rs. 2,53,126-76 |
| b) Hungund Tq. | ... | Rs. 1,12,282-83 |

2) Amount allotted for construction, maintenance, repairs and improvements of rural roads:

| | | |
|---|---|---|
| a) Badami Tq. | ... | Rs. 3.3 Lakhs |
| b) Hungund Tq. | ... | Rs. 3.3 Lakhs |

**ಶ್ರೀ ಬಿ.ಎಂ.ಹೊರಕೇರಿ**- ಮಾನ್ಯ ಮಂತ್ರಿಗಳು ನನ್ನ ಪ್ರಶ್ನೆಗೆ ಉತ್ತರವಾಗಿ ಮಾರುಕಟ್ಟೆಯ ರಸ್ತೆಗಳ ನಿರ್ಮಾಣಕ್ಕಾಗಿ ಸಂಬಂಧಪಟ್ಟ ಪ್ರದೇಶದಿಂದ ವಸೂಲ್ಮಾಡಿದ ಮೊಬಲಗನ್ನು ಬಳಸಿಕೊಳ್ಳಲಾಗಿದೆಯೇ ಎಂದು ಕೇಳಿದ್ದಕ್ಕೆ ಅವಶ್ಯಕತೆ ಏನಿಲ್ಲ ಎಂದು ಉತ್ತರ ಕೊಟ್ಟೀದ್ದೀರಿ. ಆದರೆ ಆಯಾಯ ಪ್ರದೇಶದಲ್ಲಿ ವಸೂಲ್ಮಾಡಿದಂತಹ ಮೊಬಲಗನ್ನು ಆಯಾ ಪ್ರದೇಶದಲ್ಲಿಯೇ ರಸ್ತೆಗಳ ನಿರ್ಮಾಣಕ್ಕಾಗಿ ಖರ್ಚು ಮಾಡುವುದಕ್ಕೆ ಅವಕಾಶವಿದ್ದರೆ ಒಳ್ಳೆಯದಲ್ಲವೇ?

**Sri. R.D. Kittur**- This is a peculiar problem that we are having in the Marketing Department to have connecting roads to the main market yards. No doubt we are collecting cess from the sellers for these activities we are crediting this amount directly to the PWD which is taking care of construction of roads in the market yards.

**ಶ್ರೀ ಬಿ.ಎಂ.ಹೊರಕೇರಿ**-ಈಗ ಪ್ರಶ್ನೆಗೆ ಕೊಟ್ಟಿರುವ ಉತ್ತರದಲ್ಲಿ ಬಾದಾಮಿ ಮತ್ತು ಹುನಗುಂದ ತಾಲ್ಲೂಕಿಗೆ ಸದರಿ ಮಾರುಕಟ್ಟೆ ಪ್ರದೇಶದಲ್ಲಿ ರಸ್ತೆಗಳ ನಿರ್ಮಾಣ ದುರಸ್ತಿ ಹಾಗೂ ನಿರ್ವಹಿಸುವುದಕ್ಕೆ ಎಂದು 2-3ಲಕ್ಷ ರೂಪಾಯಿಗಳನ್ನು ಒದಗಿಸಿದ್ದೇವೆ ಎಂದ ಹೇಳಿದ್ದಾರೆ. ಈ ಹಣವನ್ನು ಅಲ್ಲಿಯ ರಸ್ತೆಯ ಪರಿಸ್ಥಿತಿಗನುಗುಣವಾಗಿ ಲೆಕ್ಕ ಮಾಡಿ ಹಾಕಿದ್ದಾರೆಯೇ ಅಥವಾ ಸುಮ್ಮನೇ ಇಷ್ಟು ಎಂದು ಎರಡು ತಾಲ್ಲೂಕುಗಳಲ್ಲಿ ಹಂಚಿದ್ದಾರೆಯೇ?

**ಶ್ರೀ ಆರ್.ಡಿ.ಕಿತ್ತೂರು**-ಅದು ಸ್ವಲ್ಪ ಹೆಚ್ಚು ಕಡಿಮೆ ಜಾಸ್ತಿ ಇದೆ. ಇದರ ಲೆಕ್ಕವನ್ನೇನೂ ನಾವು ಮಾಡುತ್ತಾ ಇಲ್ಲ. ಎಲ್ಲೆಲ್ಲಿ ಅದರ ಅವಶ್ಯಕತೆ ಇದೆಯೋ ಅಲ್ಲೆಲ್ಲಾ ಮಾಡಬೇಕಾಗುತ್ತದೆ. ವಿಲ್ಹೇಜ್ ರಸ್ತೆಗಳ ಮತ್ತು ಮಾರ್ಕೆಟಿಂಗ್‌ಯಾರ್ಡ್ ರಸ್ತೆಗಳಿಗೂ ಲಿಂಕ ಇರತಕ್ಕ ರಸ್ತೆಯ ಕೆಲಸವನ್ನು ಮಾಡಬೇಕಗುತ್ತದೆ.

**ಶ್ರೀ ಟಿ.ಭೈರಪ್ಪಾಜಿ**- ಆಯಾಯ ತಾಲ್ಲೂಕಿನಲ್ಲಿ ವಸೂಲು ಮಾಡತಕ್ಕ ತೆರಿಗೆಯನ್ನು ಆಯಾ ತಾಲ್ಲೂಕಿನಲ್ಲಿಯೇ ಖರ್ಚು ಮಾಡುವುದಕ್ಕೆ ವ್ಯವಸ್ಥೆ ಮಾಡಿದ್ದೀರಾ? ಅಥವಾ ತಾಲ್ಲೂಕುವಾರು ಅಂಕಿ ಅಂಶಗಳ ಆಧಾರ ಮೇಲೆ ಕೆಲಸವನ್ನು ಖರ್ಚು ಮಾಡುವುದಕ್ಕೆ ವ್ಯವಸ್ಥೆ ಮಾಡುತ್ತೀರಾ?

ಶ್ರೀ ಆರ್.ಡಿ.ಕಿತ್ತೂರು– ಆ ತರಹ ಮಾಡುತ್ತಿಲ್ಲ. We are collecting the Cess from the market yards and crediting to the Road Funds Cess of the State and they are utilizing that amount.

ಶ್ರೀ ಬಿ.ಎಂ.ಹೊರಕೇರಿ–ಈ ರಸ್ತೆಗಳ ನಿರ್ವಹಣೆ ಮತ್ತು ರಿಪೇರಿ ಇತ್ಯಾದಿ ಕೆಲಸಗಳನ್ನು ಲೋಕೋಪಯೋಗಿ ಇಲಾಖೆಯ ಮುಖಾಂತರ ಮಾಡಿಸುತ್ತೀರಾ ಅಥವಾ ತಾಲ್ಲೂಕು ಬೋರ್ಡ್ ಮುಖಾಂತರ ಮಾಡಿಸುತ್ತೀರಾ?

**Sri. R.D. Kittur**- It is being done by the PWD.

* * * * *

## ಪಂಚಾಯತ್ ರಾಜ್ಯದ ಪ್ರತ್ಯೇಕ ನಿರ್ದೇಶನಾಲಯ

10.04.1976

**ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು**

(a) whether there is a proposal to have an independent Directorate of Panchayat Raj at State level;

(b) if so the proposed pattern of administration from village level to the State level;

(c) the role of the V.L.W. in the new concept of Development administration to be set up;

(d) whether he will be a multi-purpose worker or a single-purpose worker to attend agriculture development only;

(e) if the V.L.W. is single-purpose worker, who is the basic worker to look after the all-round development works at village level?

**ಶ್ರೀ ಕೆ. ಪ್ರಭಾಕರ್ (ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಮಂತ್ರಿಗಳು)**

(a) No.

(b) Does not arise.

(c) Does not arise.

(d) Gramsevak has to function according to the job chart priscribed in G O. No. DPC 100 EGS 66 dated 5th July 1967 and Head to such other duties assigned to him from time to time.

(e) There are various functionaries of different departments to look after the all-round development work at village level.

ಶ್ರೀ ಬಿ.ಎಂ. ಹೊರಕೇರಿ-- ರಾಜ್ಯ ಮಟ್ಟದಲ್ಲಿ ಪಂಚಾಯಿತಿ ರಾಜ್ಯಕ್ಕೆ ಸ್ವತಂತ್ರ ನಿರ್ದೇಶನಾಲಯವನ್ನೊಂದನ್ನು ಸಲಹೆ ಇದೆಯೇ ಎಂದು ಕೇಳಿದಕ್ಕೆ ಇಲ್ಲವೆಂದು ಹೇಳಿದ್ದೀರಿ. ರಾಷ್ಟ್ರ ಮಟ್ಟದಲ್ಲಿ ಮತ್ತು ರಾಜ್ಯ ಮಟ್ಟದಲ್ಲಿ ಅಭಿವೃದ್ಧಿಯ ಪ್ರಗತಿಗಾಗಿ ಕೇಂದ್ರದಲ್ಲಿಯಾಗಲೀ, ರಾಜ್ಯ ಸರ್ಕಾರವಾಗಲೀ, ವ್ಯವಸಾಯ ಇಲಾಖೆಯಾಗಲೀ, ಕಂದಾಯ ಇಲಾಖೆಯಾಗಲೀ, ಪಶುವೈದ್ಯ ಇಲಾಖೆಯಾಗಲೀ ಇವುಗಳೂ ಆಡಳಿತ ಹರಿದು ಹಂಚಿ ಹೋದಂತೆ ಆಗಿದೆ. ಅದರ ಅರ್ಥವಿಷ್ಟೆ, ಎವರಿ ಬಾಡೀಸ್ ವರ್ಕ್ ಇಸ ನಾಟ್ ಮ್ಯಾನ್ಸ್ ವರ್ಕ್ ಎಂದು ಆಯಿತು. ಆಗ ಅಭಿವೃದ್ಧಿ ದೆಶೆ ಏನಾಗುತ್ತದೆ?

ಶ್ರೀ ಕೆ. **ಪ್ರಭಾಕರ್**-- ಇಂಥ ಯೋಜನೆ ಸಫಲವಾಗಬೇಕಾದರೆ ನಿರ್ದಿಷ್ಟವಾಗಿ ಒಬ್ಬ ನಾಯಕರು ಇದ್ದು ಎಲ್ಲ ಚಟುವಟಿಕೆಗಳನ್ನು ಸಮನ್ವಯವಾಗುವ ರೀತಿಯಲ್ಲಿ ಕಾರ್ಯಗತ ಆಗುವ ರೀತಿಯಲ್ಲಿ ಮಾಡಬೇಕು. ಮಾನ್ಯ ಸದಸ್ಯರು ನೋ ಮ್ಯಾನ್ಸ್ ವರ್ಕ್ ಎಂದು ಹೇಳುತ್ತಿದ್ದಾರೆ ಅದು ಅಷ್ಟು ಸಮಂಜಸವಾಗುವುದಿಲ್ಲ. ಬೇರೆ ಬೇರೆ ಇಲಾಖೆಯು ಕಾರ್ಯಗಳನ್ನು ಸಮನ್ವಯಗೊಳಿಸಿ ನಿರ್ದೇಶನ ಕೊಟ್ಟು ಆಗಿಂದಾಗ್ಗೆ ಎಷ್ಟು ಪ್ರಗತಿಯಾಗಿದೆ ಎನ್ನುವುದನ್ನು ನೋಡುವುದಕ್ಕೆ ಸೂಕ್ತ ವ್ಯವಸ್ಥೆ ಇದೆ. ತಮಗೆಲ್ಲಾ ಗೊತ್ತಿರುವ ಹಾಗೆ ತಾಲೂಕಾ ಮಟ್ಟದಲ್ಲಿ ಬಿ.ಡಿ.ಓ. ರವರು ಇರುತ್ತಾರೆ, ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳಿರುತ್ತಾರೆ ಮತ್ತು ಡಿವಿಜನಲ್ ಮಟ್ಟದಲ್ಲಿ ಡಿವಿಜನಲ್ ಕಮೀಷನರ್‌ರವರು ಇರುತ್ತಾರೆ. ಹೀಗೆ ಆಯಾಯ ಮಟ್ಟದಲ್ಲಿ ಆಗತಕ್ಕಂಥ ಕೆಲಸಗಳನ್ನು ನೋಡಿ ಏನೇನು ಬದಲಾವಣೆಗಳನ್ನು ಮಾಡಬೇಕು ಇನ್ನು ಏನು ಅಭಿವೃದ್ಧಿ ಕಾರ್ಯಗಳನ್ನು ಮಾಡಬೇಕು ಎನ್ನುವ ಬಗ್ಗೆ ವ್ಯವಸ್ಥೆ ಮಾಡಲಾಗಿದೆ. ಆದುದರಿಂದ ನೋ ಮ್ಯಾನ್ಸ್ ವರ್ಕ್ ಎಂದು ಹೇಳತಕ್ಕಂಥಾದ್ದು ಬೇಜವಾಬ್ದಾರಿಯ ವಾದವಾಗುತ್ತದೆ.

ಶ್ರೀ **ಬಿ.ಎಂ.ಹೊರಕೇರಿ**--ಸ್ವಾಮಿ, ಬೇರೆ ಇಲಾಖೆಗಳಲ್ಲಿರುವಂತ ವ್ಯವಸ್ಥೆ ಈ ಅಭಿವೃದ್ಧಿ ಇಲಾಖೆಯಲ್ಲಿ ಇಲ್ಲ. ರೆವಿನ್ಯೂ ಇಲಾಖೆಯಲ್ಲಿ ಗ್ರಾಮ

ಮಟ್ಟದಿಂದ ಹಿಡಿದು ರಾಜ್ಯಮಟ್ಟದವರೆಗೆ ಸಂಬಂಧಪಟ್ಟ ಅಧಿಕಾರಿಗಳು ಇದ್ದಾರೆ. ಅಭಿವೃದ್ಧಿ ಇಲಾಖೆಯಲ್ಲಿ ಬಿ.ಡಿ.ಓ. ಪಂಚಾಯತಿಯು ಇರುತ್ತದೆ. ಅಸಿಸ್ಟಂಟ್ ಕಮೀಷನರ್‌ರವರು ಕಂದಾಯ ಇಲಾಖೆಗೆ ಹೆಚ್ಚಿಗೆ ಗಮನ ಕೊಡುತ್ತಾರೆ. ಆದುದರಿಂದ ಇಲ್ಲಿ ಸರಿಯಾಗಿ ಕೆಲಸ ನಡೆಯಲು ಅನುಕೂಲವಾಗುವಂತೆ ಸ್ವತಂತ್ರವಾದ ನಿರ್ದೇಶನಾಲಯ ಮಾಡುವ ವಿಚಾರ ನಿಮ್ಮ ಮುಂದೆ ಇದೆಯೇ?

**ಶ್ರೀ ಕೆ. ಪ್ರಭಾಕರ**–ಈಗ ಇರತಕ್ಕ ವ್ಯವಸ್ಥೆ ಸಾಕಷ್ಟು ಚೆನ್ನಾಗಿದೆ. ಬೇರೆ ಬೇರೆ ಇಲಾಖೆಯ ಅಧಿಕಾರಿಗಳು ಇದ್ದರೂ ಪ್ರಾಸಂಗಿಕವಾಗಿ ಬಿ.ಡಿ.ಓ. ಮಟ್ಟದಲ್ಲಿ ಒಂದು ತಾಂತ್ರಿಕ ಜ್ಞಾನವನ್ನು ಇಟ್ಟುಕೊಂಡು ಕೆಲಸ ಮಾಡುತ್ತಾರೆ. ಆಯಾಯ ಇಲಾಖೆಯವರು ಜನರಲ್ ಸೂಪರ್‌ವಿಷನ್ ನೋಡಿಕೊಂಡು ಹೋಗುತ್ತಾರೆ. ಬೇರೆ ಮಾಡುವ ವಿಚಾರ ಸರ್ಕಾರಕ್ಕೆ ಇನ್ನೂ ಗೊತ್ತಾಗಿಲ್ಲ.

**ಶ್ರೀಮತಿ ದಮಯಂತಿ ಬೋರೇಗೌಡ**– ಪಂಚಾಯಿತಿಗಳ ಹಣಕಾಸಿನ ಪರಿಸ್ಥಿತಿ ಬಹಳ ಶೋಚನೀಯವಾಗಿದ್ದು ೯೫೦ರಷ್ಟು ಹಳ್ಳಿಗಳಲ್ಲಿ ಯಾವ ಅಭಿವೃದ್ಧಿ ಕೆಲಸಗಳು ಆಗದೆ ಇರುವುದು ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ಪ್ರಭಾಕರ**– ಸರ್ಕಾರದ ಗಮನಕ್ಕೆ ಬಂದಿದ್ದು ಅದನ್ನು ಉತ್ತಮಗೊಳಿಸುವ ವಿಚಾರವು ಸರ್ಕಾರದ ಗಮನದಲ್ಲಿದೆ.

**ಶ್ರೀ ಬಿ.ಎಂ. ಹೊರಕೇರಿ**– ಕೊಂಡಜ್ಜಿ ಬಸಪ್ಪ ಸಮಿತಿಯವರು ವರದಿ ಸಲ್ಲಿಸಿರುವುದು ಗೊತ್ತಿದೆಯೆ ಸ್ವಾಮಿ?

**ಶ್ರೀ ಕೆ. ಪ್ರಭಾಕರ**– ಗೊತ್ತಿದೆ.

**ಶ್ರೀ ಬಿ.ಎಂ. ಹೊರಕೇರಿ**– ಹಾಗಿದ್ದಲ್ಲಿ, ೧೯೬೪ನೇ ಇಸವಿಯಲ್ಲಿ ವಿಧಾನಸಭೆಯಲ್ಲಿ ತಯಾರಾದ ಮಸೂದೆಯನ್ನು ಇನ್ನೂ ಏಕೆ ಕಾಯಿದೆಯಾಗಿ ಪರಿವರ್ತಿಸಿಲ್ಲ?

**ಶ್ರೀ ಕೆ. ಪ್ರಭಾಕರ**– ಮೂಲಭೂತವಾಗಿ ಅದರ ತತ್ವ ಸರ್ಕಾರಕ್ಕೆ ಗೊತ್ತಿದೆ. ಉತ್ತಮವಾಗಿಸಬೇಕೆನ್ನುವ ವಿಚಾರವೂ ಸರ್ಕಾರದ ಪರಿಶೀಲನೆಯಲ್ಲಿದೆ.

* * * * *

# ಡಿಪ್ಲಮೋ ಪದವೀಧರರ ನೇಮಕಾತಿ

**01.07.1977**

**ಶ್ರೀ ಬಿ.ಎಂ.ಹೊರಕೇರಿ**–ನನ್ನ ಎರಡನೇ ಪ್ರಶ್ನೆಗೆ ಉತ್ತರ ಕೊಡುತ್ತಾ ಕರ್ನಾಟಕ ಕೃಷಿ ಕೈಗಾರಿಕಾ ಸಂಸ್ಥೆಗೆ ಸಂಬಂಧಿಸಿದಂತೆ ಕರ್ನಾಟಕ ಕೃಷಿ ಕೈಗಾರಿಕಾ ಸಂಸ್ಥೆಯಲ್ಲಿ ನೇಮಿಸುವ ಉದ್ದೇಶಕ್ಕಾಗಿ ತಾಂತ್ರಿಕ ಇಂಜಿನಿಯರಿಂಗ್‌ನಲ್ಲಿ ಡಿಪ್ಲೋಮಾದಾರರಿಗೆ ಸರಿಸಮವಾಗಿ ವ್ಯವಸಾಯ ಇಂಜಿನಿಯರ್‌ನಲ್ಲಿ ಡಿಪ್ಲೋಮ ಪಡೆದವರನ್ನು ಪರಿಗಣಿಸಲಾಗಿದೆ ಎಂದು ಹೇಳಿದ್ದೀರಿ, ಇದರ ಪ್ರಕಾರ ಹಾಸನ ಇಂಪ್ಲಿಮೆಂಟ್ಸ್ ಫ್ಯಾಕ್ಟರಿಯಲ್ಲಿ ಎಷ್ಟು ಜನರನ್ನು ನೇಮಕ ಮಾಡಿಕೊಳ್ಳಲಾಗಿದೆ?

**ಶ್ರೀ ಎನ್. ಚಿಕ್ಕೇಗೌಡ**–ಕೃಷಿ ಕೈಗಾರಿಕೆಯಲ್ಲಿ ಇದುವರೆಗೆ ನೇಮಕ ಮಾಡಿಕೊಂಡಿಲ್ಲ. ಆದರೆ 45 ಜನರಿಗೆ ತರಬೇತಿ ಕೊಟ್ಟು, ಅವರ ಪೈಕಿ 19 ಜನರಿಗೆ ಕೃಷಿ ಸೇವಾ ಕೇಂದ್ರಗಳನ್ನು ಪ್ರಾರಂಭ ಮಾಡಲು ಅವಕಾಶ ಮಾಡಿಕೊಡಲಾಗಿದೆ. ಹಾಸನ ಇಂಪ್ಲಿಮೆಂಟ್ಸ್ ಫ್ಯಾಕ್ಟರಿಯಲ್ಲಿ ಇಂತಹವರನ್ನು ತೆಗೆದುಕೊಂಡಿರುವ ಬಗ್ಗೆ ನನ್ನ ಹತ್ತಿರ ಈಗ ಮಾಹಿತಿ ಇಲ್ಲ. ಆದರೆ ನೆನ್ನೆಯಿಂದ ಕೃಷಿ ವಿಶ್ವವಿದ್ಯಾನಿಲಯದಲ್ಲಿ ಇಂತಹವರ ಪೈಕಿ ಹತ್ತು ಜನರನ್ನು ತೆಗೆದುಕೊಳ್ಳಬೇಕೆಂದು ನಿರ್ಣಯ ಮಾಡಿದ್ದಾರೆ. ಜೊತೆಗೆ ವ್ಯವಸಾಯ ಇಲಾಖೆಯಲ್ಲಿ ಸಾಯಿಲ್ ಕನಸರ್‌ವೇಷನ್‌ಗೆ ಸಂಬಂಧಪಟ್ಟಂತೆ ಡಿಸ್ಟ್ರಿಕ್ ಲೆವಲ್‌ನಲ್ಲಿ 32 ಮೆಕ್ಯಾನಿಕ್ಸ್ ಪೋಸ್ಟ್‌ಗಳಿವೆ. ಅವುಗಳನ್ನು ಸಹ ಇವರಿಗೇ ಕೊಡುವುದಕ್ಕೆ ಯೋಚನೆ ಮಾಡುತ್ತಿದ್ದೇವೆ. ಆದರೆ ಈಗಿನ ವೇತನ ಶ್ರೇಣಿಯನ್ನು ಹೋಲಿಕೆ ಮಾಡಿದಾಗ ಡಿಪ್ಲೋಮಾ ಜ್ಯೂನಿಯರ್ ಇಂಜಿನಿಯರ್‌ಗೆ ರೂ. 500 ರಿಂದ 1120ರವರೆಗೆ ಇದ್ದರೆ ಇವರಿಗೆ ರೂ. 340 ರಿಂದ 800ರವರೆಗೆ ಇದೆ. ಇದನ್ನು ಮೊದಲು ಪರಿಹಾರ ಮಾಡಬೇಕಾಗಿದೆ. ಒಟ್ಟಿನಲ್ಲಿ ಈ ಡಿಪ್ಲೋಮಾ ಹೋಲ್ಡರ್ಸ್ ಏನಿದ್ದಾರೆ ಇವರುಗಳನ್ನು ಸಾಧ್ಯವಾದಷ್ಟೂ ಮಟ್ಟಿಗೆ ನಮ್ಮ ವ್ಯವಸಾಯ ಇಲಾಖೆಗೆ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇವೆ. ಆದರೆ ಎಲ್ಲರನ್ನೂ ನಮ್ಮ ಸರ್ಕಾರದ ಇಲಾಖೆಯಲ್ಲಿಯೇ ನೇಮಕ ಮಾಡುವುದು ಕಷ್ಟವಾಗುತ್ತದೆ.

**ಶ್ರೀ ಬಿ.ಎಂ. ಹೊರಕೇರಿ**–ಇಲ್ಲಿ ನನ್ನ ಕೊನೆಯ ಪ್ರಶ್ನೆಗೆ ಉತ್ತರ ಕೊಡುತ್ತಾ ಕೃಷಿ ಸೇವಾ ಕೇಂದ್ರಗಳನ್ನು ಪ್ರಾರಂಭಿಸುವುದಕ್ಕೆ ತರಬೇತಿ ನೀಡಲಾಗಿದೆ

ಎಂದು ಹೇಳಿದ್ದೀರಿ. ಇಂತಹವರ ಪೈಕಿ ಎಷ್ಟು ಜನರಿಗೆ ಇಲ್ಲಿಯವರೆಗೆ ಕೃಷಿ ಸೇವಾ ಕೇಂದ್ರಗಳನ್ನು ಪ್ರಾರಂಭ ಮಾಡಲು ನೆರವು ನೀಡಲಾಗಿದೆ?

**ಶ್ರೀ ಎನ್.ಚಿಕ್ಕೇಗೌಡ**–ಕೃಷಿ ಸೇವಾ ಕೇಂದ್ರಗಳನ್ನು ತೆರೆಯಲು 19 ಜನರಿಗೆ ಕಮರ್ಷಿಯಲ್ ಬ್ಯಾಂಕುಗಳ ಮೂಲಕ ಸಾಲ ಕೊಡಿಸುವುದಕ್ಕೆ ವ್ಯವಸ್ಥೆ ಮಾಡಿದ್ದೇವೆ.

**ಶ್ರೀ ಬಿ.ಎಂ.ಹೊರಕೇರಿ**–ನನ್ನ ಎರಡನೆಯ ಪ್ರಶ್ನೆಗೆ ಉತ್ತರ ಕೊಡುತ್ತಾ ನೀರಾವರಿ ಹಾಗೂ ಭೂ ಸಾರ ಸಂರಕ್ಷಣ ಇಲಾಖೆಯ ಬಗ್ಗೆ ಭೂಸಾರ ಸಂರಕ್ಷಣ ಕೇಂದ್ರಕ್ಕೆ ವ್ಯವಸಾಯ ಇಂಜಿನಿಯರಿಂಗ್ ಸಂಸ್ಥೆಯ ಈ ಡಿಪ್ಲೋಮಾದಾರರನ್ನು ನೇಮಿಸುವುದಕ್ಕೆ ದರ್ಜೆ ಹಾಗೂ ನೇಮಕಾತಿಗಳಲ್ಲಿ ಅವಕಾಶವನ್ನು ಕಲ್ಪಿಸಿಲ್ಲವೆಂದು ಹೇಳಿದ್ದೀರಿ. ಆದರೆ ಮಹಾರಾಷ್ಟ್ರದಲ್ಲಿ ಇದಕ್ಕೆ ಅವಕಾಶ ಕಲ್ಪಿಸಿ ಕೊಟ್ಟಿರುವಾಗ ಇಲ್ಲಿಯೂ ಏತಕ್ಕೆ ಮಾಡಬಾರದು?

**ಶ್ರೀ ಎನ್. ಚಿಕ್ಕೇಗೌಡ**–ಈ ಬಗ್ಗೆ ಸೇವಾ ನಿಯಮಗಳನ್ನು ತಿದ್ದುಪಡಿ ಮಾಡತಕ್ಕಂಥ ವಿಚಾರ ಸರ್ಕಾರದ ಪರಿಶೀಲನೆಯಲ್ಲಿದೆ. ಆದರೆ ವೇತನ ಶ್ರೇಣಿಯಲ್ಲಿ ಅಂತರವಿರುವುದರಿಂದ ಮೊದಲು ಅದನ್ನು ಪರಿಹಾರ ಮಾಡಿ ನಂತರ ಈ ಕೇಡರ್ ಅಂಡ್ ರೆಕ್ರೂಟ್‌ಮೆಂಟ್ ರೂಲ್ಸ್‌ನ್ನು ತಿದ್ದುಪಡಿ ಮಾಡಬೇಕಾಗಿದೆ.

**ಶ್ರೀ ಸಿ.ಭೈರೇಗೌಡ**–ವ್ಯವಸಾಯ ಇಂಜಿನಿಯರಿಂಗ್ ಸಂಸ್ಥೆಯಲ್ಲಿ ತರಬೇತಿ ಪಡೆದವರನ್ನು ಕೆಲಸಕ್ಕೆ ತೆಗೆದುಕೊಳ್ಳದೆ ಇತರೆಯವರನ್ನು ನೇಮಕ ಮಾಡಿಕೊಳ್ಳಲು ಕಾರಣವೇನು? ವ್ಯವಸಾಯ ಇಂಜಿನಿಯರಿಂಗ್‌ನಲ್ಲಿ ತರಬೇತಿ ಕೊಡುವಾಗ ಈಗಿರತಕ್ಕಂಥ ಸಿಲೆಬಸ್‌ನ್ನು ಬದಲಾವಣೆ ಮಾಡಿಯಾದರೂ ಇಲ್ಲಿ ತರಬೇತಿ ಪಡೆದವರಿಗೆ ಕೆಲಸ ಕೊಡಲು ಏರ್ಪಾಡು ಮಾಡುತ್ತೀರಾ?

**ಶ್ರೀ ಎನ್. ಚಿಕ್ಕೇಗೌಡ**–ವ್ಯವಸಾಯ ಇಂಜಿನಿಯರಿಂಗ್ ಸ್ಕೂಲ್‌ಗಳಲ್ಲಿ ಈಗ ಇರತಕ್ಕಂಥ ಸಿಲೆಬಸ್ ಪ್ರಕಾರ ವ್ಯವಸಾಯಕ್ಕೆ ಸಂಬಂಧಪಟ್ಟಂತೆ ಇರತಕ್ಕಂಥ ಉಪಕರಣಗಳನ್ನು, ಯಂತ್ರಗಳನ್ನು ರಿಪೇರಿ ಮಾಡುವುದನ್ನು ಮತ್ತು ಅವುಗಳನ್ನು ಯಾವ ರೀತಿ ಉಪಯೋಗ ಮಾಡುವುದು ಎಂಬುದನ್ನು ಹೇಳಿಕೊಡಲಾಗುತ್ತದೆ. ತರಬೇತಿ ಮುಗಿದ ನಂತರ ಅವರ ಸ್ವಂತ ಜಮೀನಿನಲ್ಲಿ ಕೆಲಸ ಮಾಡಲು ಹೋಗುತ್ತಾರೆ. ಆದಕಾರಣ ಇದಕ್ಕನುಗುಣವಾಗಿ ಸಿಲೆಬಸ್‌ನ್ನು ಪ್ರಿಸಕ್ರೈಬ್ ಮಾಡಲಾಗಿದೆ. ಇನ್ನು ಮುಂದೆ ನಮ್ಮ ವ್ಯವಸಾಯ ಇಲಾಖೆಗೆ ಇವರುಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ತೆಗೆದುಕೊಳ್ಳುತ್ತೇವೆ.

**ಶ್ರೀ ಎ.ಶರಣಪ್ಪ**-ಈ ಕೃಷಿ ಇಲಾಖೆಯಲ್ಲಿ ಡಿಪ್ಲೋಮಾ ಪಡೆದವರಿಗೆ ನೌಕರಿ ಪಡೆಯಲಿಕ್ಕೆ ಸಾಕಷ್ಟು ಅವಕಾಶವಿಲ್ಲ. ಇನ್ನು ಮುಂದೆ ಬೇರೆ ಇಲಾಖೆಗಳಲ್ಲಿ ಕ್ವಾಲಿಫೈಡ್ ಆದ ಡಿಪ್ಲೋಮಾ ಹೋಲ್ಡರ್ಸ್ ಬೇಕು ಎಂದು ಅರ್ಜಿಗಳನ್ನು ಕರೆದಾಗ ಇವರುಗಳೂ ಸಹ ಅರ್ಜಿ ಹಾಕಿಕೊಳ್ಳಲು ಅವಕಾಶ ಮಾಡಿಕೊಡುತ್ತೀರಾ?

**ಶ್ರೀ ಎನ್. ಚಿಕ್ಕೇಗೌಡ**-ಈ ಬಗ್ಗೆ ಸಂಬಂಧಪಟ್ಟ ಇಲಾಖೆಗಳಿಗೆ ತಿಳಿಸುತ್ತೇವೆ.

* * * * *

# ಸುಳೇಬಾವಿ ಹಾಗೂ ಗುಳೇದಗುಡ್ಡದಲ್ಲಿ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಕಟ್ಟಡ

**01.07.1977**

**ಶ್ರೀ ಬಿ.ಎಂ.ಹೊರಕೇರಿ**–ಸ್ವಾಮಿ, ಸೂಳೇಬಾವಿಯಲ್ಲಿ ಬಸ್ ನಿಲ್ದಾಣವನ್ನು ನೇಮಿಸುವುದಕ್ಕಾಗಿ ಪ್ಲಾನು ಮತ್ತು ಅಂದಾಜನ್ನು ತಯಾರಿಸಲಾಗಿದೆಯೇ ಎಂದು ಕೇಳಿದ್ದಕ್ಕೆ ಇಲ್ಲ ಎಂದು ಉತ್ತರ ಕೊಟ್ಟಿದ್ದೀರಿ, ಅಲ್ಲಿ ಮಳೆಗಾಲದಲ್ಲಿ ಮತ್ತು ಬೇಸಿಗೆಯಲ್ಲಿ ಪ್ರಯಾಣಿಕರು ನಿಂತುಕೊಳ್ಳುವುದಕ್ಕೆ ರಕ್ಷಣೆ ಇಲ್ಲದೆ ಬಹಳ ತೊಂದರೆಯಾಗಿದೆ, ಆದಕಾರಣ ಅಲ್ಲಿ ತಾತ್ಕಾಲಿಕವಾಗಿ ಒಂದು ಷೆಡ್ ಹಾಕಿಸುವುದಕ್ಕೆ ಏರ್ಪಾಡು ಮಾಡುತ್ತೀರಾ?

**Sri M. Mohammed Ali-** That has got to be done. It depends on the funds that will be available to the corporation. While sanctioning a bus station the factors like traffic, helimate, question of nationalization, etc., are kept in-view and as and when funds become available this will be taken up.

**ಶ್ರೀ ಬಿ.ಎಂ. ಹೊರಕೇರಿ**–ಗುಳೇದಗುಡ್ಡದಲ್ಲಿ ಖಾಯಂ ಬಸ್ ನಿಲ್ದಾಣವನ್ನು ಕಟ್ಟಿಸುವ ಸಲುವಾಗಿ ಆ ಪ್ರದೇಶದ ಜನರು ಕೆಲವರು ಉಪವಾಸ ಸತ್ಯಾಗ್ರಹವನ್ನು ಕೈಗೊಂಡದ್ದು ತಮ್ಮ ಲಕ್ಷ್ಯಕ್ಕೆ ಬಂದಿದೆಯೇ?

**Sri. M. Mohammed Ali-** As far as Guledgud is concerned, the corporation has appointed a committee to select places where bus stations can be constructed. From the list that has been given to me I find that work of bus station at Guledgud will be taken up this year.

**ಶ್ರೀ ಜೆ.ಎಲ್. ಕಬಾಡಿ**–ಬಸ್‌ಸ್ಟ್ಯಾಂಡ್ ಕಟ್ಟುವ ವಿಷಯದಲ್ಲಿ ಕೆ.ಎಸ್.ಆರ್.ಟಿ.ಸಿ. ಯಲ್ಲಿ ಫಂಡ್ ಅವೆಲೆಬಲ್ ಆದರೆ ಬಸ್‌ಸ್ಟ್ಯಾಂಡ್ ಕಟ್ಟಿಸುತ್ತೇನೆ ಎಂದು ಕಾಮನ್ ಸ್ಲೋಗನ್ನ್ನು ಮಾನ್ಯಮಂತ್ರಿಗಳು ಹೇಳುತ್ತಿದ್ದಾರೆ ಗುಳೇದಗುಡ್ಡದಲ್ಲಿ ಬಸ್‌ಸ್ಟ್ಯಾಂಡ್ ಕಟ್ಟಿಸಲು ಮುಖ್ಯ

ಮಂತ್ರಿಗಳು ಅಡಿಗಲ್ಲು ಹಾಕಿದ್ದಾರೆ. ಆದರೆ ಅದು ಸೆಲೆಕ್ಷನ್ ಕಮಿಟಿಯ ತೀರ್ಮಾನದ ಮೇಲೆ ಹೋಗುತ್ತದೆಂದು ಹೇಳಿದ್ದಾರೆ. ಅದಕ್ಕೆ ತಾವು ಏನು ಹೇಳುತ್ತೀರಿ?

**Sri M. Mohammed Ali-** This is also under the consideration of the committee. Wherever foundation stones have been laid, preference is given for selecting such places. I do not think there will be much delay to start the work where foundations have been laid.

* * * * *

## ಚಕ್ಕಡಿ ರಸ್ತೆ

18.06.1977

**ಶ್ರೀ ಬಿ.ಎಂ. ಹೊರಕೇರಿ**– ತಾವು (ಅ) ಪ್ರಶ್ನೆಗೆ ಕೊಟ್ಟಿರುವ ಉತ್ತರವನ್ನು ನೋಡಿದರೆ (ಅ) ಪ್ರಶ್ನೆ ಉದ್ಭವಿಸುವುದಿಲ್ಲ ಎಂದು ಹೇಳಿದ್ದೀರಿ. ಅಲ್ಲಲ್ಲಿ ಕೆಲವು ಕಡೆ ಒತ್ತುವರಿ ಮಾಡಿರಬಹುದು, ಆದರೆ ತೊಂದರೆ ಉಂಟಾದಂತಹ ಪ್ರಕರಣಗಳನ್ನು ತ್ವರಿತವಾಗಿ ತೀರ್ಮಾನಿಸಲಾಗುವುದೆಂದು ಸಹ ಹೇಳಿದ್ದೀರಿ. ತೊಂದರೆ ಉಂಟಾದ ವ್ಯಕ್ತಿಗಳು ಎಂದರೆ, ಸಾರ್ವಜನಿಕರಿಗೆ ತೊಂದರೆಯಾಗುತ್ತದೆಯೇ ಹೊರತು ಅಕ್ಕಪಕ್ಕದವರಿಗೆ ತೊಂದರೆಯಾಗುವುದಿಲ್ಲ. ಅಕ್ಕಪಕ್ಕದವರು ಕೂಡಿ ಅತಿಕ್ರಮಣ ಮಾಡಿರುತ್ತಾರೆ. ಇಂಥ ಸಂದರ್ಭಗಳಲ್ಲಿ ಯಾರಿಗೆ ದೂರು ಕೊಡಬೇಕು?

**ಶ್ರೀ ಎನ್. ಹುಚ್ಚಮಾಸ್ತಿಗೌಡ**– ಆ ರೀತಿ ಇದ್ದರೆ ಅಂಥ ಜಮೀನನ್ನು ಖುಲ್ಲಾ ಮಾಡಿಸುವ ಜವಾಬ್ದಾರಿ ರೆವಿನ್ಯೂ ಇಲಾಖೆಗೆ ಬರುತ್ತದೆ ಆದುದರಿಂದ ಆ ಬಗ್ಗೆ ರೆವಿನ್ಯೂ ಇಲಾಖೆಯವರಿಗೆ ದೂರುಕೊಟ್ಟರೆ ಕ್ರಮ ತೆಗೆದುಕೊಳ್ಳುತ್ತೇವೆ.

**ಶ್ರೀ ಬಿ.ಎಂ. ಹೊರಕೇರಿ**– ಅಂಥ ರಸ್ತೆಗಳನ್ನು ಸ್ವಲ್ಪ ರಿಪೇರಿ ಮಾಡಿಸಿ ಚಕ್ಕಡಿಗಳು ಓಡಾಡುವುದಕ್ಕೆ ಅವಕಾಶ ಕಲ್ಪಿಸಿಕೊಡಬೇಕಾಗಿದೆ ಈ ಕೆಲಸವನ್ನು ರೆವಿನ್ಯೂ ಇಲಾಖೆಯುವರು ಮಾಡಬೇಕೋ ಅಥವಾ ಬೇರೆ ಯಾರು ಮಾಡಬೇಕು?

**ಶ್ರೀ ಎನ್.ಹುಚ್ಚಮಾಸ್ತಿಗೌಡ**–ಸಣ್ಣ ಸಣ್ಣ ಗ್ರಾಮದ ರಸ್ತೆಗಳನ್ನು ರಿಪೇರಿ ಮಾಡಿಸತಕ್ಕ ಜವಾಬ್ದಾರಿ ತಾಲ್ಲೂಕ ಬೋರ್ಡುಗಳಿಗೆ ಮತ್ತು ಗ್ರಾಮ ಪಂಚಾಯತಗಳಿಗೆ ಸೇರಿದ್ದು.

**ಶ್ರೀ ಬಿ.ಎಂ.ಹೊರಕೇರಿ**–ಪಂಚಾಂಯತಗಳಿಗಾಗಲಿ, ತಾಲ್ಲೂಕ ಬೋರ್ಡುಗಳಿಗಾಗಲೀ ಸಾಕಷ್ಟು ಹಣಕಾಸು ದೊರೆತಿರುವುದಿಲ್ಲ. ಆದ್ದರಿಂದ ಎ.ಪಿ.ಎಂ.ಸಿ.ಯು ನೂರಕ್ಕೆ ಒಂದು ರೂಪಾಯಿಯಂತೆ ವ್ಯಾಪಾರಸ್ಥರಿಂದ ವಸೂಲ್ಮಾಡುವುದಕ್ಕೆ ಏಕೆ ಪ್ರಾವಿಜನ್ ಮಾಡಬಾರದು?

**ಶ್ರೀ ಎನ್. ಹುಚ್ಚಮಾಸ್ತಿಗೌಡ**– ರೆಗ್ಯುಲೇಟೆಡ್ ಮಾರ್ಕೆಟ್ ಮೇಲೆ ಹಾಕತಕ್ಕ ತೆರಿಗೆಯನ್ನು ಯಾವ ಯಾವ ರಸ್ತೆಗಳಿಗೆ ಉಪಯೋಗಿಸಿಕೊಳ್ಳಹುದೆಂದು

ಆಯಾಯ ವಲಯಗಳಿಂದ ಒಂದು ಪಟ್ಟಿಯನ್ನು ತಯಾರಿಸಿ, ಎಂಜಿನಿಯರಿಂಗ್ ಇಲಾಖೆಯ ಮುಖೇನ ಕೆಲಸ ಮಾಡಿಸಬೇಕು. ಇದರಿಂದ ಸಣ್ಣ ಸಣ್ಣ ಗ್ರಾಮಾಂತರ ಪ್ರದೇಶಗಳ ರಸ್ತೆಗಳಾದರೆ ಅವುಗಳನ್ನು ಸರಿಪಡಿಸುವುದಕ್ಕೆ ಆಗುತ್ತದೋ ಇಲ್ಲವೋ ಹೇಳಲಾರೆ ಆದರೆ ಅದು ಒಂದು ಮಾರ್ಗ.

**ಶ್ರೀ ಬಿ.ಮುದ್ದುರಾಮಯ್ಯ–** ಕೆಲವು ಕಡೆ ಬಂಡವಾಳಶಾಹಿಗಳು ಒತ್ತುವರಿ ಮಾಡಿ ತೆಂಗಿನ ಮರಗಳನ್ನು ಬೆಳೆಸಿದ್ದಾರೆ. ಆ ಬಗ್ಗೆ ಏನು ಕ್ರಮ ಕೈಗೊಳ್ಳುತ್ತೀರಿ?

**ಶ್ರೀ ಎನ್. ಹುಚ್ಚಮಾಸ್ತಿಗೌಡ–** ತೆಂಗಿನ ಮರಗಳನ್ನು ಬೆಳೆಸಿದ್ದರೆ ಅವುಗಳನ್ನು ಕಡಿಸಿ ಖುಲ್ಲಾ ಮಾಡಿಸಲಾಗುವುದು.

**ಶ್ರೀ ಬಿ.ಎಂ. ಹೊರಕೇರಿ–** ಮಾನ್ಯ ಸಚಿವರು ರೆಗ್ಯುಲೇಟೆಡ್ ಮಾರ್ಕೆಟ್ ಮೇಲೆ ಹಾಕುವ ತೆರಿಗೆಗಳನ್ನು ಉಪಯೋಗಿಸಿಕೊಂಡು ರಸ್ತೆಗಳನ್ನು ರಿಪೇರಿ ಮಾಡಿಸಬಹುದೆಂದು ಹೇಳಿದರು. ಆದರೆ ಇದಕ್ಕೆ ತಕ್ಕ ಪ್ರಾವಿಜನ್‌ನನ್ನು ತಾಲ್ಲೂಕು ಬೋರ್ಡಿನವರಾಗಲೀ, ಪಂಚಾಯಿತಿಯವರಾಗಲೀ ಮಾಡುವುದಿಲ್ಲ.

**ಶ್ರೀ ಎನ್. ಹುಚ್ಚಮಾಸ್ತಿಗೌಡ–** ಅದಕ್ಕೆ ಪರಿಹಾರ ನನ್ನ ಇಲಾಖೆಯಲ್ಲಿ ಇಲ್ಲ. ನನ್ನ ಇಲಾಖೆಗೆ ಸಂಬಂಧಪಟ್ಟದ್ದು ಏನೆಂದರೆ ಯಾರಾದರು ರಸ್ತೆಗೆ ಸಂಬಂಧಿಸಿದ ಜಮೀನನ್ನು ಒತ್ತುವರಿ ಮಾಡಿಕೊಂಡಿದ್ದರೆ ಅದನ್ನು ಖುಲ್ಲಾ ಮಾಡಿಸುವುದೇ ಹೊರತು ಬಾಕಿ ಕೆಲಸಗಳು ನಮ್ಮ ಇಲಾಖೆಗೆ ಸಂಬಂಧಪಡುವುದಿಲ್ಲ. ನಾನು ಅದಕ್ಕೆ ಪೂರ್ಣ ಪರಿಹಾರವನ್ನೇನು ಹೇಳಲಾರೆ.

* * * * *

# ಬಸವ ಜಯಂತಿಯನ್ನು ರಜಾ ದಿನವೆಂದು ಘೋಷಿಸುವ ಬಗ್ಗೆ ನಡೆದ ಚರ್ಚೆ

23.06.1977

**ಶ್ರೀ ಎಸ್.ವ್ಯೆ.ಪಾಟೀಲ**– ಬಸವಣ್ಣನವರು ಮಹಾಪುರುಷರು, ಸಮಾಜೋದ್ಧಾರಕರು ಎಂದು ತಿಳಿದುಕೊಂಡು, ಅವರ ಜನ್ಮದಿನವನ್ನು ರಜಾ ದಿನವನ್ನಾಗಿ ಮಾಡತಕ್ಕಂಥಾದ್ದು. ಇದ್ದರೆ ಮಾಡುತ್ತೇವೆ ಇಲ್ಲದಿದ್ದರೆ ಇಲ್ಲ ಎನ್ನುವ ಉತ್ತರ ಏತಕ್ಕೆ?

**ಶ್ರೀ ಟಿ.ಎಂ.ಮಂಜುನಾಥ**–ಅನೇಕ ರಾಷ್ಟ್ರ ನಾಯಕರ ಸ್ಮರಣಾರ್ಥವಾಗಿ ಅವರ ಜನ್ಮ ದಿನಗಳನ್ನು ರಜಾದಿನವನ್ನಾಗಿ ಘೋಷಣೆ ಮಾಡಿದ್ದಾರೆ. ಹೀಗೆ ಘೋಷಣೆ ಮಾಡಲು ಪಾಲಿಸಬೇಕಾದ ಅಂಶಗಳಾವುವು. ಮತ್ತು ಬಸವಣ್ಣನವರ ಜನ್ಮದಿನವನ್ನು ರಜಾದಿನವನ್ನಾಗಿ ಘೋಷಿಸಲು ಆ ಅಂಶಗಳು ಕಂಡುಬರುವುದಿಲ್ಲವೆ?

**ಶ್ರೀ ಎಚ್.ಎಂ.ಚನ್ನಬಸಪ್ಪ**–ಅರ್ಜಿಯನ್ನು ಅವರು ಕೊಟ್ಟಿದ್ದಾರೆ. ಅದರ ಮಹತ್ವವನ್ನು ವಿಚಾರ ಮಾಡುತ್ತಿದ್ದೇವೆ.

**ಶ್ರೀ ಟಿ.ಎಂ.ಮಂಜುನಾಥ**–ತಾವು ಯಾವ ಸನ್ನಿವೇಶ, ಸಂದರ್ಭಗಳನ್ನು ಯೋಚನೆ ಮಾಡುತ್ತಿದ್ದೀರಾ?

**ಶ್ರೀ ಎಚ್.ಎಂ.ಚನ್ನಬಸಪ್ಪ**– ಇದಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿ ಅದರ ಮಹತ್ವ ಏನು ಇದೆ, ಅದು ಎಷ್ಟು ಜನಕ್ಕೆ ಸಂಬಂಧಪಟ್ಟದ್ದು, ಇದನ್ನು ಮಾಡತಕ್ಕಂಥಾದ್ದು ಸರಿಯೇ ಇದೆಲ್ಲ ಅನೇಕ ಸಮಸ್ಯೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪರಿಶೀಲಿಸಬೇಕಾಗುತ್ತದೆ.

**ಶ್ರೀ ಕೆ.ಆರ್.ಶ್ರೀನಿವಾಸಲು ನಾಯ್ಡು**–ಹನ್ನೊಂದು, ಹನ್ನೆರಡನೆಯ ಶತಮಾನದಲ್ಲಿಯೇ ಶ್ರೀ ಬಸವಣ್ಣನವರು ಕಾಯಕವೇ ಕೈಲಾಸವೆಂದು ಘೋಷಿಸಿದರು. ಬಹುಶಃ ಈ ಮನೆಯಲ್ಲಿ ಅದು ಯಾರಿಗೂ ಇಲ್ಲವೆಂದು ಭಾವಿಸುತ್ತೇನೆ. 1978ನೇ ಇಸವಿಯಾದರೂ ಪರಿಶೀಲನೆ ಮಾಡುತ್ತೇನೆ ಎಂದು ವಿಳಂಬ ಮಾಡುತ್ತಿರುವುದು ಸೂಕ್ತವಲ್ಲ. ದಯವಿಟ್ಟು ತಮ್ಮ ಕಾಲದಲ್ಲಿಯೇ

ಇದನ್ನು ಮಾಡಿ ಒಳ್ಳೆಯ ಹೆಸರನ್ನು ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ದಯವಿಟ್ಟು ಒಪ್ಪಿಕೊಳ್ಳಿ ನಿಮಗೆ ಒಳ್ಳೆಯ ಹೆಸರು ಸಿಗುತ್ತದೆ.

**ಶ್ರೀ ಎಚ್.ಎಂ.ಚನ್ನಬಸಪ್ಪ**–ವಿಚಾರ ಮಾಡುತ್ತೇವೆ.

**ಶ್ರೀ ಕೋಣಂದೂರ ಲಿಂಗಪ್ಪ**– ಏನು ವಿಚಾರ ಮಾಡುತ್ತೀರಿ?

**ಶ್ರೀ ಎ.ಶರಣಪ್ಪ**– ಸ್ಟೇಟ್ ರೀ ಆರ್ಗನೈಸ್ ಆಗುವುದಕ್ಕೆ ಮುಂಚೆ 1956ನೇ ಇಸವಿ ಮೊದಲು ನಿಜಾಮ್ ರಾಜ್ಯದಲ್ಲಿ ಹೈದರಾಬಾದ ಇದ್ದಾಗ ಬಸವಣ್ಣನವರ ಜನ್ಮದಿನೋತ್ಸವವನ್ನು ಜನರಲ್ ಹಾಲಿಡೆಯಾಗಿ ಡಿಕ್ಲೇರ್ ಮಾಡಿದ್ದರು. ಅದರಂತೆ ನಮ್ಮ ಕರ್ನಾಟಕ ರಾಜ್ಯದಲ್ಲಿ ಇಲ್ಲಿಯವರೆಗೂ ಈ ಒಂದು ವಿಷಯದಲ್ಲಿ ವಿಚಾರ ಮಾಡಲಾಗದಿರುವುದಕ್ಕೆ ಕಾರಣವೇನು?

1-30 ಪಿ.ಎಂ.

**ಶ್ರೀ ಎಚ್.ಎಂ.ಚನ್ನಬಸಪ್ಪ**–ಹಿಂದೆ ಏನೇನು ನಡವಳಿಕೆಗಳು ಕರ್ನಾಟಕದಲ್ಲಿ ನಡೆದಿತ್ತು ಎನ್ನತಕ್ಕಂಥ ವಿಷಯಗಳು ನಮಗೆ ಗೊತ್ತಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಮಹಾತ್ಮ ಬಸವೇಶ್ವರರು ಮಹತ್ವದ ಕೆಲಸಗಳನ್ನು ನಡೆಸಿರುವರು, ಚರಿತ್ರಾರ್ಹ ಪುರುಷರು ಮತ್ತು ಅವರ ಹೆಸರು ದೇಶದಲ್ಲಿ ಶಾಶ್ವತವಾಗಿದೆ. ಅವರು ಇಡೀ ಪ್ರಪಂಚಕ್ಕೆ ಅನ್ವರ್ಥಕವಾಗತಕ್ಕಂಥ ಕಾರ್ಯಕ್ರಮಗಳನ್ನು ತೆಗೆದುಕೊಂಡರು ಎನ್ನತಕ್ಕಂಥ ವಿಷಯ ನಮಗೆ ಗೊತ್ತಿದೆ. ಅದರ ಮಹತ್ವವೂ ಗೊತ್ತಿದೆ. ಅದರ ಸಾಧ್ಯಾಸಾಧ್ಯತೆಗಳನ್ನು ನಾವು ವಿಚಾರ ಮಾಡುತ್ತೇವೆಂದು ಈ ಸಂದರ್ಭದಲ್ಲಿ ನಾನು ಹೇಳುತ್ತೇನೆ.

**ಶ್ರೀ ಕೋಣಂದೂರು ಲಿಂಗಪ್ಪ**– ಅದರ ಸಾಧ್ಯಾಸಾಧ್ಯತೆಗಳನ್ನು ವಿಚಾರ ಮಾಡುವುದಕ್ಕೆ ಇನ್ನೂ ಎಷ್ಟು ಕಾಲ ತೆಗೆದುಕೊಳ್ಳಬಹುದು? ಕೇರಳ, ತಮಿಳುನಾಡು, ಆಂಧ್ರ ರಾಜ್ಯಗಳಲ್ಲಿ ಆಯಾ ರಾಜ್ಯಗಳ ಮಹಾಪುರುಷರ ಜನ್ಮ ದಿನಾಚರಣೆಯನ್ನು ಅಧಿಕೃತ ರಜಾ ದಿನವಾಗಿ ಆ ಸರ್ಕಾರಗಳು ಘೋಷಣೆ ಮಾಡಿದರುವುದನ್ನು ತಾವು ಪರಿಗಣನೆಗೆ ತೆಗೆದುಕೊಂಡು ಇವತ್ತು ಅಥವಾ ನಾಳೆಯೊಳಗೆ ಈ ವಿಚಾರವನ್ನು ಇತ್ಯರ್ಥ ಮಾಡುತ್ತೀರಾ?

**ಶ್ರೀ ಎಚ್.ಎಂ.ಚನ್ನಬಸಪ್ಪ**–ಇಂಡಿಯಾ ಸರ್ಕಾರದವರು ವರ್ಷದಲ್ಲಿ ಎಷ್ಟು ದಿನಗಳು ರಜಾ ದಿನಗಳೆಂದು ಘೋಷಣೆ ಮಾಡುತ್ತಾರೆ. ಅದನ್ನು ನೋಡಿಕೊಂಡು ಅದರಲ್ಲಿ ಬರುವ ಯಾವ ಯಾವ ದಿನಗಳನ್ನು ನಾವು

ರಜಾ ದಿನಗಳೆಂದು ಘೋಷಣೆ ಮಾಡಬೇಕಾಗಿದೆ ಎಂಬುದನ್ನು ತಿಳಿದುಕೊಂಡು ನಮ್ಮ ಕರ್ನಾಟಕ ರಾಜ್ಯದಲ್ಲಿರತಕ್ಕಂಥ ಯಾವ ಯಾವ ಇನ್ಸ್‌ಟ್ಯೂಷನ್ನನವರು ನಮಗೆ ಬರೆದಿದ್ದಾರೆ ಎಂಬುದನ್ನು ಗಮನದಲ್ಲಿಟ್ಟುಕೊಂಡು ನಾವು ಎಷ್ಟು ರಜಾ ದಿನಗಳನ್ನು ಕೊಡಬೇಕೆಂಬುದನ್ನು ನೋಡಿಕೊಂಡು ಅಷ್ಟರೊಳಗೆ ಇದನ್ನೆಲ್ಲಾ ಅಳವಡಿಸಿಕೊಂಡು ಸಾಧ್ಯವಾದರೆ ಮಾಡುತ್ತೇವೆ?

**ಶ್ರೀ ಬಿ.ಎಂ.ಹೊರಕೇರಿ**–ಏಪ್ರೀಲ್ ತಿಂಗಳಲ್ಲಿ ಬಸವ ಜಯಂತಿಯನ್ನು ಮಾಡಬೇಕೆಂದು ಶಾಸಕರೆಲ್ಲಾ ಒಂದು ಮನವಿಯನ್ನು ಸಲ್ಲಿಸಿದ್ದುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀ ಎಚ್.ಎಂ.ಚನ್ನಬಸಪ್ಪ**–ಬಂದಿದೆ.

**ಶ್ರೀ ಮೈ.ಸಿ.ಪಾಟೀಲ**–ಮಹಾಪುರುಷರು ಒಂದೊಂದು ವಿಷಯದಲ್ಲೂ ಯಾವ ರೀತಿಯ ಚರ್ಚೆಯಿಲ್ಲದೇ ತಾವಾಗಿಯೇ ಅನೇಕ ವಿಚಾರಗಳನ್ನು ಜನತೆಗೆ ಬಿಟ್ಟಿದ್ದಾರೆ. ಅದರಂತೆ ದೇಶೋದ್ಧಾರ ಮಾಡಿದಂತಹ ಸಕಲ ಮಹಾಪುರುಷರ ವಿಷಯದಲ್ಲೂ ವಿಚಾರ ಮಾಡುವ ಅವಶ್ಯಕತೆ ಇರುವುದರಿಂದ ಸರ್ಕಾರ ಈ ಕೆಲಸವನ್ನು ತಾವಾಗಿಯೇ ಮಾಡಬೇಕು.

**ಶ್ರೀ ಎಚ್.ಎಂ.ಚನ್ನಬಸಪ್ಪ**–ವಿಚಾರ ಮಾಡತಕ್ಕಂಥ ಅವಶ್ಯಕತೆ ಪ್ರತಿಯೊಂದು ವಿಷಯಕ್ಕೂ ಇದೆ.

**ಶ್ರೀ ಮೈ.ಸಿ.ಪಾಟೀಲ**–ಇದು ಸ್ಪಷ್ಟವಾಗಿ ಕಣ್ಣಿಗೆ ಕಾಣಿಸಿದರೂ ಜನ್ಮ ಬೇರೆ ಏತಕ್ಕೆ ಬೇಕು?

**ಶ್ರೀ ಎಚ್.ಎಂ.ಚನ್ನಬಸಪ್ಪ**–ಕಣ್ಣಿಗೆ ಕಂಡರೂ ಶಾಸ್ತ್ರೀಯ ಕ್ರಮ ಅನುಸರಿಸಿ ಎಂದು ಹೇಳಿದ್ದಾರೆ.

**ಶ್ರೀ ಮೈ.ಸಿ.ಪಾಟೀಲ**–ವಿಧಾನಸೌಧದಲ್ಲಿ ಇದಕ್ಕೇ ಒಂದು ಎನ್‌ಕ್ವಯರಿ ಕಮೀಟಿ ಬೇಕು?

**ಶ್ರೀ ಎಚ್.ಎಂ.ಚನ್ನಬಸಪ್ಪ**–ಎಲ್ಲಾ ವಿಷಯ ಪ್ರತ್ಯೇಕವಾಗಿ ಕಾಣುತ್ತಾ ಇದೆ.

* * * * *

# ಅರಣ್ಯ ಇಲಾಖೆಯ ಮೇಲಿನ ಚರ್ಚೆಯಲ್ಲಿ ಮಾಡಿದ ಭಾಷಣ

08.03.1976

**ಶ್ರೀ ಬಿ.ಎಂ. ಹೊರಕೇರಿ** (ಗುಳೇದಗುಡ್ಡ)-ಸನ್ಮಾನ್ಯ ಅಧ್ಯಕ್ಷರೇ ಸನ್ಮಾನ್ಯ ಮಂತ್ರಿಗಳೇ ಹಾಗೂ ಸನ್ಮಾನ್ಯ ಸದಸ್ಯರೇ, ಈ ಅರಣ್ಯ ಇಲಾಖೆಯ ಬಗ್ಗೆ ಅನೇಕ ಮಾನ್ಯ ಸದಸ್ಯರು ಇಲ್ಲಿಯವರೆಗೆ ಮಾತನಾಡಿದ್ದಾರೆ. ಮಾನ್ಯ ಸಚಿವರು ಅರಣ್ಯ ಇಲಾಖೆಯ ಬೇಡಿಕೆಗಳನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಈ ಅರಣ್ಯ ಇಲಾಖೆಯ ಮಹತ್ವದ ಬಗ್ಗೆ ಹೇಳಬೇಕಾದರೆ, ಈ ಹಿಂದೆ ನಮ್ಮ ದೇಶದಲ್ಲಿ ದಂಡಕಾರಣ್ಯವಿತ್ತು ಎಂಬುದನ್ನು ಮಹಾಭಾರತದಿಂದ ಓದಿ ತಿಳಿದುಕೊಂಡಿದ್ದೇವೆ. ಈಗ ನಮ್ಮ ರಾಜ್ಯದ ಕೆಲವು ಜಿಲ್ಲೆಗಳಾದ ಬಿಜಾಪುರ, ಬೀದರ, ರಾಯಚೂರು ಇಲ್ಲೆಲ್ಲಾ ಬಹಳ ಕಡಿಮೆ ಮಳೆ ಬೀಳುತ್ತದೆ. ಈ ಕಾರಣದಿಂದ ಅಲ್ಲೆಲ್ಲಾ ಶೇಕಡಾ 4 ರಷ್ಟು ಅರಣ್ಯವಿದೆ ಎಂಬುದು ಇಲ್ಲಿ ಕೊಟ್ಟಿರುವ ಅಂಕಿ ಅಂಶಗಳಿಂದ ತಿಳಿದು ಬರುತ್ತದೆ. 400 ವರ್ಷಗಳ ಹಿಂದೆ ಸರ್ವಜ್ಞ ಕವಿ ಏನು ಹೇಳಿದ್ದನೆಂದರೆ:-

*ಊರು ಸನಿಹದಲ್ಲಿಲ್ಲ: ನೀರೊಂದು ಗಾವುದವು*
*ಸೇರಿ ನಿಲ್ಲುವದೆ ನೆರಳಿಲ್ಲ ಬಡಗಲ*
*ದಾರಿ ಬೇಡೆಂದ ಸರ್ವಜ್ಞ:*

ಎಂಬುದಾಗಿ ಹೇಳಿದ್ದಾನೆ. ಅಂದರೆ ಕರ್ನಾಟಕ ರಾಜ್ಯದ ಉತ್ತರ ದಿಕ್ಕಿನ ಕಡೆಗೆ ಹೋಗುವುದೇ ಬೇಡ ಎಂದು ಅವನು ಹೇಳಿದ್ದಾನೆ. ಈ ಕಾರಣದಿಂದಾದರೂ ಆ ಭಾಗಗಳಲ್ಲಿ ಹೆಚ್ಚು ಅರಣ್ಯ ಬೆಳೆಸುವ ಅಗತ್ಯವಿದೆ. ಈಗ ಬದಾಮಿ ತಾಲ್ಲೂಕಿನ ದಕ್ಷಿಣದ ಕಡೆಗೆ ಸ್ವಲ್ಪ ಅರಣ್ಯವಿದೆ. ಸರ್ಕಾರದವರು ಒಂದು ಯೋಜನೆ ಹಾಕಿಕೊಂಡು ಅಲ್ಲಿ ಅನೇಕ ವರ್ಷಗಳಿಂದ ಗಿಡಗಳನ್ನು ಬೆಳೆಸುತ್ತಾ ಬಂದಿದ್ದಾರೆ. ಇನ್ನಷ್ಟು ಮುತುವರ್ಜಿ ವಹಿಸಿ ಅಲ್ಲಿ ಇನ್ನೂ ಹೆಚ್ಚಿನ ಭಾಗದಲ್ಲಿ ಕಾಡನ್ನು ಬೆಳೆಸಬೇಕೆಂದು ಹೇಳುತ್ತೇನೆ. ನಮ್ಮ ರಾಜ್ಯದಲ್ಲಿ ನಿಸರ್ಗದತ್ತವಾದಂಥ ಪ್ರದೇಶಗಳು ನಾನಾ ಭಾಗಗಳಲ್ಲಿ ಇರುವ ಕೆಲವು ಕಡೆಗಳಲ್ಲಿ 200 ಇಂಚು ಮಳೆಯಾದರೆ, ಮತ್ತೆ ಕೆಲವು ಕಡೆಗಳಲ್ಲಿ ನೂರು ಇಂಚುಗಳವರೆಗೂ ಮಳೆಯಾಗುತ್ತದೆ. ಆದರೆ ಇನ್ನೂ ಕೆಲವು ಕಡೆಗಳಲ್ಲಿ 30 ಇಂಚಿಗಿಂತ ಜಾಸ್ತಿಯಾಗುವುದಿಲ್ಲ. ನಮ್ಮ ಬಿಜಾಪುರ ಜಿಲ್ಲೆಯಲ್ಲಿ

ಮಳೆ ಯಾವಾಗಲೂ ಅನಿಶ್ಚಿತ. ಅಲ್ಲಿ ಹೆಚ್ಚು ಮಳೇ ಬೀಳುವಂತಾಗಲು ಗಿಡಗಳನ್ನು ಹೆಚ್ಚು ಬೆಳೆಸಬೇಕೆಂದು ಹೇಳುತ್ತೇನೆ. ಉಷ್ಣ ಪ್ರದೇಶಗಳಲ್ಲಿ ಎಂತಹ ಗಿಡಗಳನ್ನು ಬೆಳೆಸಬೇಕೆಂಬುದರ ಬಗ್ಗೆ ಸಂಶೋಧನೆ ಮಾಡಿದರೆ ಅದರ ಆಧಾರದ ಮೇಲೆ ಕಾಡನ್ನು ಬೆಳೆಸಬೇಕೆಂದು ನಾನು ಸಲಹೆ ಮಾಡುತ್ತಿದ್ದೇನೆ. ಜೊತೆಗೆ ಬೆಳೆಸಿದಂಥ ಗಿಡಗಳನ್ನು ರಕ್ಷಣೆ ಮಾಡುವುದು ಸಹ ಅತ್ಯಂತ ಪ್ರಾಮುಖ್ಯವಾದುದು ಈಗ ಫಾರೆಸ್ಟ್ ಗಾರ್ಡ್ ಸಿಬ್ಬಂದಿಗಳು ಇದ್ದರೂ ಸಹ ಸಾರ್ವಜನಿಕರು ಜವಬ್ದಾರಿಯೂ ಸಹ ಇದರಲ್ಲಿ ಇದೆ ಎಂಬುದನ್ನು ಎಲ್ಲರೂ ಅರಿತುಕೊಳ್ಳಬೇಕು. ರಾಷ್ಟ್ರೀಯ ಮನೋಭಾವನೆ ಬೆಳೆದಾಗ ಮಾತ್ರ ಅರಣ್ಯದ ರಕ್ಷಣೆಯಾಗುತ್ತದೆ. ಬ್ರಿಟಿಷರ ಕಾಲದಲ್ಲಿ ಇದ್ದಂತವರು ಈಗ ಕೆಲವರು ಇರಬಹುದು. ಅಂದರೆ ನಮ್ಮಂತಹವರು ಕೆಲವರು ಇರಬಹುದು. ಹಳೆಯ ತಲೆಗಳೆಲ್ಲಾ ಹೋಗಿವೆ. ಆದರೆ ಈಗ ಹೊಸ ಜನಾಂಗ ಬಂದಿದೆ. ಅವರಲ್ಲಿ ಒಂದು ರಾಷ್ಟ್ರೀಯ ಮನೋಭಾವನೆ ಹೆಚ್ಚಾಗಿ ಬೆಳೆಯುತ್ತದೆ. ಇದನ್ನು ನಾವು ಗ್ರಾಮಾಂತರ ಯುವಕರಲ್ಲಿ ಕಾಣಬಹುದಾಗಿದೆ. ಮತ್ತು ಗ್ರಾಮಾಭಿವೃದ್ಧಿ ಕೆಲಸಗಳನ್ನು ಮಾಡಲು ಯುವಕ ಮಂಡಲಿಯವರು ಮುಂದೆ ಬರುತ್ತಿದ್ದಾರೆ. ಆದ ಕಾರಣ ಇವರುಗಳ ಒಂದು ಸಹಾಯವನ್ನು ಪಡೆದುಕೊಂಡು ಅರಣ್ಯವನ್ನು ಬೆಳೆಸಿದರೆ ಆಗ ಕಾಡಿನ ಸಂಪತ್ತು ನಮ್ಮದು ಎಂಬ ಭಾವನೆ ಸಾರ್ವಜನಿಕ ವಲಯದಲ್ಲಿ ಬಂದು, ಅದರ ಒಂದು ಅಭಿವೃದ್ಧಿ ಚೆನ್ನಾಗಿ ಆಗುತ್ತದೆಂದು ಹೇಳುತ್ತೇನೆ. ಈ ರೀತಿಯಲ್ಲಿ ಮಾಡದಿದ್ದರೆ ಅರಣ್ಯ ಇಲಾಖೆಯವರು ಬೆಳೆಸಿದ ಗಿಡಗಳನ್ನು ಸಾರ್ವಜನಿಕರು ಹಾಳು ಮಾಡುತ್ತಾರೆ. ಆದಕಾರಣ ಗ್ರಾಮಾಂತರ ಪ್ರದೇಶಗಳಲ್ಲಿ ಕಮ್ಯುನಿಟಿ ಫಾರೆಸ್ಟ್ ಎಂದಾಗಲೀ ಅಥವಾ ಸೋಷಿಯಲ್ ಫಾರೆಸ್ಟ್ ಎಂದಾಗಲೀ ಮಾಡಿ ಗಿಡಗಳನ್ನು ಬೆಳೆಸುವುದು ಒಳಿತು. ಹೀಗೆ ಅರಣ್ಯ ಇಲಾಖೆಯ ಸಿಬ್ಬಂದಿಯವರ ಟೆಕ್ನಿಕಲ್ ಸೂಪರ್ ವಿಜನ್ ಕೊಡುವುದರ ಮೂಲಕ ಈ ಕೆಲಸವನ್ನು ಕಟ್ಟಿಕೊಂಡರೆ ಫಾರೆಸ್ಟ್ ನಮ್ಮದು ಎಂಬ ಭಾವನೆ ಎಲ್ಲೆಲ್ಲಿಯೂ ಬರುತ್ತದೆ. ಮುಖ್ಯವಾಗಿ ಎಲ್ಲೆಲ್ಲಿ ವಾಲಂಟರಿ ಆರ್ಗನೈಜೇಷನ್ ಇದೆಯೋ ಅಲ್ಲೆಲ್ಲಾ, ಈ ಗಿಡಗಳನ್ನು ಬೆಳೆಸುವ ಮತ್ತು ನೋಡಿಕೊಳ್ಳುವ ಜವಾಬ್ದಾರಿಯನ್ನು ಅವರಿಗೆ ವಹಿಸಿದರೆ ಅವರು ಬಹಳ ಮುತುವರ್ಜಿಯಿಂದ ನೋಡಿಕೊಳ್ಳುತ್ತಾರೆ. ಆದಕಾರಣ ಕಮ್ಯುನಿಟಿ ಫಾರೆಸ್ಟ್ ಎಂದು ಮಾಡುವುದು ಸೂಕ್ತವೋ ಅಥವಾ ಸೋಷಿಯಲ್ ಫಾರೆಸ್ಟ್ ಎಂದು

ಮಾಡುವುದು ಸೂಕ್ತವ್ಪೋ ಎಂಬುದನ್ನು ಮಾನ್ಯ ಮಂತ್ರಿಗಳೂ ವಿಚಾರ ಮಾಡಿ ಸೂಕ್ತವಾದುದನ್ನು ಜಾರಿಗೆ ಕೊಡಬೇಕೆಂಬ ಬೇಡಿಕೆಯನ್ನು ತಮ್ಮ ಮುಂದೆ ಇಡುತ್ತಿದ್ದೇನೆ. ಈಗ ಬಾದಾಮಿ ತಾಲ್ಲೂಕಿನಲ್ಲಿ ನೀರಿನ ಸೌಕರ್ಯವಿದೆ. ಮತ್ತು ಅಲ್ಲಿ ಅಲ್ಲಿ ಸ್ವಲ್ಪ ಭಾಗ ಫಾರೆಸ್ಟ್ ಕೂಡ ಇದೆ. ಜೊತೆಗೆ ಗುಡ್ಡದಿಂದ ನೀರು ಹರಿದು ಬರುತ್ತಿರುತ್ತದೆ. ಈ ನೀರಿನ ಸೌಲಭ್ಯವನ್ನು ಪಡೆದುಕೊಂಡು ತೋಟಗಾರಿಕೆಗೆ ಉಪಯೋಗ ಮಾಡಿಕೊಳ್ಳಬಹುದೆಂದು ಹೇಳುತ್ತೇನೆ. ಈಗ ನಮ್ಮಲ್ಲಿ ಫಾರೆಸ್ಟ್ ಬಗ್ಗೆ ಡೆಫನಿಷನ್ ಇದೆ. Neglected Horticulture is Forest ಏನೆಂದರೆ It is on thing to plant a tree and quite another thing to project ಎಂದು ಹೇಳುತ್ತಾರೆ. ಆದಕಾರಣ ಆ ಭಾಗಗಳಲ್ಲಿ ನೀರಾವರಿ ಸೌಲಭ್ಯವಿದ್ದಲ್ಲಿ ತೋಟಗಾರಿಕೆಯನ್ನು ಕೈಕೊಂಡು ತೋಟಗಾರಿಕೆಯನ್ನು ಹೆಚ್ಚು ಬೆಳೆಸಿದರೆ ಮತ್ತು ಹಣ್ಣಿನ ಗಿಡಗಳನ್ನು ಹೆಚ್ಚು ಹೆಚ್ಚು ಬೆಳೆಸಿದರೆ ಅದರಿಂದ ನಮ್ಮ ರಾಷ್ಟ್ರಕ್ಕೆ ಹೆಚ್ಚಿನ ಉತ್ಪನ್ನ ದೊರೆಯುತ್ತದೆ. ನಮ್ಮ ಬಾದಾಮಿ ತಾಲ್ಲೂಕಿನಲ್ಲಿ ಗುಡ್ಡಗಳು ಸಾಕಷ್ಟು ಇವೆ. ಈ ಕಾರಣದಿಂದ ಆ ಭಾಗದಲ್ಲಿ ಚಳಿಗಾಲದಲ್ಲಿ ಹೆಚ್ಚು ಚಳಿ ಇಲ್ಲದಿದ್ದರೂ ಮಳೆಗಾಲದಲ್ಲಿ ಹೆಚ್ಚು ಮಳೆಯಿಲ್ಲದಿದ್ದರೂ ಬೇಸಿಗೆಯಲ್ಲಿ ಮಾತ್ರ ಹಗಲಿನ ಶೆಕೆಗಿಂತ ರಾತ್ರಿಯ ಶೆಕೆಯೇ ಜಾಸ್ತಿಯಾಗಿರುತ್ತದೆ. ಏಕೆಂದರೆ ಗುಡ್ಡಗಳೆಲ್ಲಾ ಬಂಡೆಗಲ್ಲುಗಳು ಬಿಸಿಲಿಗೆ ಕಾದಿರುತ್ತವೆ ಈ ಕಾರಣದಿಂದ ರಾತ್ರಿ ಸಮಯದಲ್ಲಿ ಕಾಯ್ದ ಕಲ್ಲಿನಿಂದ Heat radiate ಆಗುತ್ತದೆ. ಅದನ್ನು ತಡೆದುಕೊಳ್ಳುವುದು ಕಷ್ಟವಾಗುತ್ತದೆ. ಆದಕಾರಣ ಈ ಒಂದು ಉಷ್ಣ ಹವೆಯನ್ನು ಯಾವಾಗಲೂ ಸಮತೋಲನದಲ್ಲಿರಿಸಲು ತೊಪ್ಪಲ ಪ್ರದೇಶವನ್ನುಂಟು ಮಾಡಲು ನಾವು ಅರಣ್ಯವನ್ನು ಹೆಚ್ಚು ಅಭಿವೃದ್ಧಿ ಮಾಡಬೇಕಾಗುತ್ತದೆ.

**4-00 P.M.**

ನೀರಿನ ಸೌಲಭ್ಯ ಇದ್ದ ಕಡೆಯಲ್ಲಿ ಹಾರ್ಟಿಕಲ್ಚರ್ ಮಾಡಬೇಕೆಂದು ಹೇಳುತ್ತೇನೆ. ಬಿಜಾಪುರ ಜಿಲ್ಲೆಯಲ್ಲಿ ಕೃಷ್ಣಾ ನದಿಯ ಉತ್ತರ ಪ್ರದೇಶದಲ್ಲಿ ದಟ್ಟವಾದ ಕಾಡಿನಲ್ಲಿ ಸಾಕಷ್ಟು ಪಡಭೂಮಿ ಇದೆ. ಅದರಲ್ಲಿ ಕತ್ತಾಳೆ ಎಂದು ಹೇಳುತ್ತಾರೆ. ಇದಕ್ಕೆ ಇನ್ನೂ ಅನೇಕ ಹೆಸರುಗಳು ಇದೆಯೆಂದು ಕೇಳಿದ್ದೇನೆ. ನನ್ನ ಲೆಕ್ಕಾಚಾರದ ಪ್ರಕಾರ ಅದಕ್ಕೆ ಅಷ್ಟು ನೀರಿನ ಅವಶ್ಯಕತೆಯಿಲ್ಲ.

ಇದರಿಂದ ಫೈಬರ್ ಡೆವಲಪ್‌ಮೆಂಟ್ ಮಾಡುವುದಕ್ಕೆ ಅನುಕೂಲವಾಗುತ್ತದೆ. ಇದಕ್ಕೆ ಹೆಚ್ಚಾಗಿ ಮಳೆ ಬೇಕಾಗಿಲ್ಲ ಮತ್ತು ಭೂಮಿ ಅಷ್ಟು ಫಲವತ್ತಾಗಿರಲಿಲ್ಲ. ಮಳೆಗಾಲದಲ್ಲಿ ಹಚ್ಚಿಬಿಟ್ಟರೆ ಸಾಕು. ಇದಕ್ಕೆ ಯಾವ ರಕ್ಷಣೆಯೂ ಬೇಕಾಗಿಲ್ಲ. ಇದನ್ನು ಯಾರು ಮುಟ್ಟುವುದಿಲ್ಲ ಅಥವಾ ಮೇಕೆ, ಕುರಿ ಅಥವಾ ಯಾವುದೇ ಪ್ರಾಣಿಗಳು ಇದನ್ನು ತಿನ್ನುವುದಿಲ್ಲ. ಇದರಿಂದ ಉತ್ಪತ್ತಿಯಾಗುವ ನಾರಿನಿಂದ ಅನೇಕ ನಿರುದ್ಯೋಗಿಗಳಿಗೆ ಕೆಲಸವನ್ನು ಸಹ ಒದಗಿಸಬಹುದು. ಆದ್ದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಇದನ್ನು ಮಾಡುವುದು ಒಳ್ಳೆಯದು.

ಶ್ರೀ ಸಿ. **ಬೈರೇಗೌಡ**–ಮಾನ್ಯ ಅಧ್ಯಕ್ಷರೇ ಇವತ್ತಿನ ದಿವಸ ನಮ್ಮ ರಾಜ್ಯದಲ್ಲಿ ಸರ್ಕಾರ ಇದೆಯೋ ಇಲ್ಲವೋ ಎಂದು ನಮಗೆ ಗೊತ್ತಾಗುವುದಿಲ್ಲ?

**ಉಪಾಧ್ಯಕ್ಷರು**– ಈಗ ಇನ್ನು ಒಂದು ನಿಮಿಷದಲ್ಲಿ ಬರುತ್ತಾರೆ.

ಶ್ರೀ ಬಿ.ಎಂ. **ಹೊರಕೇರಿ**– ಈ ಕತ್ತಾಳೆಯನ್ನು ಶ್ರಾವಣ ಮಾಸದಲ್ಲಿ ಹಚ್ಚಿದರೆ ಮಳೆಗಾಲವಿರುವುದರಿಂದ ಇದಕ್ಕೆ ಬಹಳಷ್ಟು ಅನುಕೂಲವಾಗುತ್ತದೆ. ಆದ್ದರಿಂದ ಮಾನ್ಯ ಸಚಿವರು ಇದನ್ನು ಮಹತ್ವವಾಗಿ ತಿಳಿದು ಇದನ್ನು ಕಾರ್ಯಗತ ಮಾಡಬೇಕೆಂದು ಹೇಳಿ ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

* * * * *

# ಶಿಕ್ಷಣ ವಿಭಾಗ ಮೇಲಿನ ಚರ್ಚೆಯಲ್ಲಿ ಮಾಡಿದ ಭಾಷಣ

ಕರ್ನಾಟಕ ವಿಧಾನಸಭೆ, 17.03.1976

**ಶ್ರೀ ಬಿ.ಎಂ. ಹೊರಕೇರಿ** (ಗುಳೇದಗುಡ್ಡ)- ಸನ್ಮಾನ್ಯ ಅಧ್ಯಕ್ಷರೇ, ಸನ್ಮಾನ್ಯ ವಿದ್ಯಾಸಚಿವರು ಇವತ್ತಿನ ದಿವಸ ಏಸೊಂದು ಬೇಡಿಕೆಗಳನ್ನು ಸಭೆಯ ಮುಂದೆ ಇಡುತ್ತಿದ್ದಾರೆ. ಅದನ್ನು ಸ್ವಾಗತಿಸುತ್ತಾ ಕೆಲವೊಂದು ಮಾತನ್ನು ಹೇಳಬಯಸುತ್ತೇನೆ. ಈ ಪ್ರಾಥಮಿಕ ವಿದ್ಯಾಭ್ಯಾಸ ನಮ್ಮ ರಾಷ್ಟ್ರದ ಏಳಿಗೆಗೆ ಒಂದು ಬುನಾದಿಯಾಗಿದೆ ಎಂದು ಹೇಳುತ್ತೇನೆ. ಈ ಪ್ರಾಥಮಿಕ ಶಾಲಾ ಶಿಕ್ಷಕರು ನಮ್ಮ ರಾಷ್ಟ್ರದ ಶಿಲ್ಪಿಗಳು ಎಂದರೆ ತಪ್ಪಾಗಲಾರದು. ಇಂಥ ಶಿಕ್ಷಕರಿಗೆ ನಾವು ಮಹತ್ವವನ್ನು ಕೊಡಬೇಕಾಗಿದೆ. ಇಷ್ಟೇ ಅಲ್ಲ ನಮ್ಮ ಭಾರತ ದೇಶ ಸ್ವಾತಂತ್ರ್ಯವನ್ನು ಗಳಿಸಿದ ಮೇಲೆ ಅನೇಕ ರೀತಿಯ ಅಭಿವೃದ್ಧಿ ದಿಶೆಯಲ್ಲಿ ನಡೆದಿದೆ. ನಮ್ಮ ಮಾನ್ಯ ಸದಸ್ಯರು ಹೇಳಿದರು ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಸರ್ಕಾರದ ಜವಾಬ್ದಾರಿ ತುಂಬಾ ಇದೆ ಎಂದು. ಆದರೆ ಸರ್ಕಾರದ ಜವಾಬ್ದಾರಿ ಇರುವಷ್ಟೇ ಮಟ್ಟಿಗೆ ವಿದ್ಯಾರ್ಥಿಗಳ ಪಾಲಕರ ಜವಾಬ್ದಾರಿಯೂ ಇದೆಯೆಂದು ಹೇಳುತ್ತೇನೆ. ಈ ಸಂದರ್ಭದಲ್ಲಿ ಒಂದು ಮಾತನ್ನು ಇಲ್ಲಿ ಹೇಳುತ್ತೇನೆ. ಈಗ್ಗೆ 400 ವರ್ಷಗಳ ಹಿಂದೆ ಸರ್ವಜ್ಞನು ಒಂದು ಮಾತನ್ನು ಹೇಳಿದ್ದಾನೆ. ಅದು ಏನೆಂದರೆ-

*ವಿದ್ಯೆಕಲಿಸದಾ ತಂದೆ ಬುದ್ಧಿ ಕೊಡದಾ ಗುರುವು*
*ಬಿದ್ದಾಗ ಬಂದು ನೋಡದಾ ತಾಯಿ, ಈ ಮೂವರೂ*
*ಶುದ್ಧ ವೈರಿಗಳು ಎಂದನಾ ಸರ್ವಜ್ಞ*

ಅಂದರೆ ಇದರಲ್ಲಿ ತಂದೆಯ ಮತ್ತು ಗುರುವಿನ ಇಬ್ಬರ ಜವಾಬ್ದಾರಿಗಳೂ ಬಹಳ ಇವೆ ಎಂದು ಒಳ್ಳೆಯ ಮಾತಿನಿಂದಲೇ ಹೇಳಿದ್ದಾರೆ. ಆದುದರಿಂದ ನಾವು ಪ್ರಾಥಮಿಕ ಶಿಕ್ಷಣದಲ್ಲಿ ಆಸಕ್ತಿಯನ್ನು ವಹಿಸಬೇಕು. ಈಗ ಏನಾಗಿದೆ ಎಂದರೆ ಪ್ರಾಥಮಿಕ ಶಾಲೆಗಳಲ್ಲಿ ನೂರು ಹಾಜರಿ ಬಂದರೆ, ಪ್ರೌಢ ಶಾಲೆಗಳಲ್ಲಿ 50 ಹಾಜರಿ ಬರುತ್ತಾರೆ. ಕಾಲೇಜುಗಳಲ್ಲಿ 25 ಹಾಜರಿ ಬರಬಹುದು. ಇನ್ನೂ ಮುಂದಕ್ಕೆ ಹೋಗುತ್ತಾ ಹೋದರೆ ಕೇವಲ ಕೈ ಬೆರಳಲ್ಲಿ ಎಣಿಸುವಷ್ಟು ಹಾಜರಿ ಬರಬಹುದು. ಇವತ್ತು ನಮ್ಮ ರಾಷ್ಟ್ರದ ಅಭ್ಯುದಯವಾಗಬೇಕಾದರೆ ಈ ಶಿಕ್ಷಣ ಸಾಕಷ್ಟು ಪ್ರಮಾಣದಲ್ಲಿ ಆಗಬೇಕೆಂದು



5482-6

ಹೇಳಿದರೆ ತಪ್ಪಾಗಲಾರದು. ಕೆಲವು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ 18 ವರ್ಷಗಳವರೆಗೆ ಕಡ್ಡಾಯವಾಗಿ ಅವನು ಪಾಸ್ ಅಗಲಿ ಫೇಲ್ ಆಗಲಿ ವಿದ್ಯಾಭ್ಯಾಸವನ್ನು ಕೊಡುತ್ತಾರೆಂದು ಕೇಳಿದ್ದೇನೆ. ಉದಾಹರಣೆಗೆ ಹೇಳುವುದಾದರೆ ನಾನು 500 ಜನ ಇದ್ದಂತಹ ಗ್ರಾಮದಲ್ಲಿ ವಿದ್ಯಾಭ್ಯಾಸವನ್ನು ಮಾಡಿಕೊಂಡು ಬಂದವನು. ವಿದ್ಯಾಭ್ಯಾಸ ಕಾಲದಲ್ಲಿ ಒಂದಿಲ್ಲೊಂದು ಸಮಸ್ಯೆ ಬರುತ್ತಾ ಇರುತ್ತದೆ. ಪ್ರಾಥಮಿಕ ಶಾಲಾ ಉಪಾಧ್ಯಾಯರಿಗೆ ಹೇಳುತ್ತೇನೆ. ಸುಗ್ಗಿಯ ಕಾಲದಲ್ಲಿ ಅರ್ಧ ದಿವಸ ಶಾಲೆ ಕೆಲಸ ಮಾಡಿದರೆ ಸಾಕು. ಇನ್ನು ಉಳಿದರ್ಧ ದಿವಸ ಶಾಲಾ ಮಕ್ಕಳಿಗೆ ಬಿಡುಗಡೆ ಕೊಟ್ಟರೆ ಅದರಿಂದ ರೈತರಿಗೆ ಅನುಕೂಲವಾಗುತ್ತದೆ. ಈ ರೀತಿಯಿಂದ ಒಂದು ವ್ಯವಸ್ಥೆಯನ್ನು ವಿದ್ಯಾ ಇಲಾಖೆ ಮಾಡಿದರೆ ಅದು ತಪ್ಪಾಗಲಾರದೆಂದು ಹೇಳುತ್ತಿದ್ದೇನೆ. ವಿದ್ಯಾಭ್ಯಾಸ ಕ್ರಮದಲ್ಲಿ ಅನೇಕ ನ್ಯೂನ್ಯತೆಗಳು ಇರುತ್ತವೆ. ಶಾಲೆಗಳಲ್ಲಿ ಶಿಕ್ಷಕರು ಕಡ್ಡಾಯವಾಗಿ ಮಾರ್ಗದರ್ಶನ ನೀಡುವಂತಾ ಶಿಕ್ಷಣವಿರಬೇಕು. ನಮ್ಮ ಸ್ನೇಹಿತರು ಹೇಳಿದರು ಹೆಣ್ಣು ಮಕ್ಕಳೇ ಶಾಲಾ ಶಿಕ್ಷಕರಿದ್ದರೆ, ಬಹಳ ಒಳ್ಳೆಯದೆಂದು ಅದು ಒಂದು ರೀತಿಯಲ್ಲಿ ಸರಿಯೆಂದು ತಿಳಿದುಕೊಳ್ಳುತ್ತೇನೆ. ಏತಕ್ಕೆಂದರೆ ಅವರು ಗಂಡಸರಿಗಿಂತಲೂ ಹೆಚ್ಚಿನ ಆಸಕ್ತಿಯನ್ನು ವಹಿಸುತ್ತಾರೆ. ಆದರೆ ಇದರಲ್ಲಿ ಅಡಚಣೆ ಇರುತ್ತದೆ. ಅವರಿಗೆ ಸರಿಯಾದ ವಸತಿ ಸೌಕರ್ಯ ಸಿಕ್ಕದ ಕಾರಣ ಅವರು ಗ್ರಾಮಾಂತರ ಪ್ರದೇಶಗಳಿಗೆ ಹೋಗಲು ಸಾಮಾನ್ಯಾಗಿ ಇಷ್ಟಪಡುವುದಿಲ್ಲವೆಂದು ಹೇಳಬಯಸುತ್ತೇನೆ.

ವಯಸ್ಕರ ಶಿಕ್ಷಣದ ವಿಚಾರದಲ್ಲಿ ಹೇಳಬೇಕಾದರೆ ವಯಸ್ಕರಿಗೆ ಶಿಕ್ಷಣವನ್ನು ಕೊಡುವುದು ಬೇಡವೆಂದು ಹೇಳುವುದರಲ್ಲಿ ನಾನು ಒಬ್ಬನಿದ್ದೇನೆ. ಏತಕ್ಕೆಂದರೆ 14 ವರ್ಷದ ತನಕ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದಿರುವಾಗ ವಯಸ್ಕರಿಗೆ ಶಿಕ್ಷಣವನ್ನು ಕೊಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಪ್ರಾಥಮಿಕ ಹಂತದಲ್ಲಿಯೇ ಹೆಚ್ಚಿನ ಮಹತ್ವವನ್ನು ಕೊಡತಕ್ಕ ವಿಚಾರ ಇರುವಾಗ ವಯಸ್ಕರಿಗೆ ಶಿಕ್ಷಣವನ್ನು ಕೊಡುವುದರಲ್ಲಿ ಹೆಚ್ಚಿನ ಮಹತ್ವವಿರುವುದಿಲ್ಲ. ನಮ್ಮ ವಿದ್ಯಾಭ್ಯಾಸದ ಯೋಗ್ಯತೆಯ ಮಟ್ಟವನ್ನು ಹೆಚ್ಚಬೇಕಾದರೆ ಶಿಕ್ಷಣಾಧಿಕಾರಿಗಳು ತಾಲ್ಲೂಕು ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ ತಪಾಸಣೆ ಮಾಡುವ ಕಾರ್ಯವನ್ನು ಕೈಗೊಳ್ಳಬೇಕು. ಅವರು ಸರ್‌ಪ್ರೈಜ್ ವಿಜಿಟ್ ಮಾಡಬೇಕು. ಅವರಿಗೆ ಒಂದು ವಾಹನದ ಸೌಕರ್ಯವನ್ನು ಮಾಡಿಕೊಡಬೇಕು.

ಶಿಕ್ಷಕರು ಯಾರು ಎಲ್ಲಿರುತ್ತಾರೆ ಸರಿಯಾಗಿ ಶಾಲೆಯನ್ನು ನಡೆಸುತ್ತಾರೋ ಇಲ್ಲವೋ ಎನ್ನುವುದನ್ನು ತನಿಖೆ ಮಾಡುವುದಕ್ಕೆ ಅನುಕೂಲವಾಗುತ್ತದೆ. ಸಧ್ಯದಲ್ಲಿಯೇ ಈ ಒಂದು ಅನುಕೂಲತೆಯನ್ನು ಮಾಡಿಕೊಡುತ್ತಾರೆಂದು ಸಚಿವರಲ್ಲಿ ಭಿನ್ನವಿಸಿಕೊಳ್ಳುತ್ತೇನೆ.

ಇನ್ನು ಒಂದು ಮುಖ್ಯವಾದ ವಿಷಯವೇನೆಂದರೆ ಪ್ರೈವೆಟ್ ಹೈಸ್ಕೂಲಗಳ ವಿಚಾರವಾಗಿ ನಮ್ಮ ಸ್ನೇಹಿತರು ಬಹಳವಾಗಿ ಹೇಳಿದ್ದಾರೆ. ಗ್ರಾಮಾಂತರ ಪ್ರದೇಶಗಳಲ್ಲಿ 100ಕ್ಕೆ 80 ಜನ ಒಕ್ಕಲಿಗರೇ ಇರುತ್ತಾರೆ. ಅಂಥವರಿಗೆ ಅಗ್ರಿಕಲ್ಚರಲ್ ಬೇಸಿಕ್ ಎಜ್ಯುಕೇಷನ್ ಕೊಡಬೇಕು. ಈ ಆಮದು ತಾಂತ್ರಿಕ ಜ್ಞಾನ ಮೂರು ವರ್ಷದಲ್ಲಿ ಕಲಿತಿದ್ದು 100 ವರ್ಷಗಳವರೆಗೆ ಮುಂದುವರೆಯುವುದಿಲ್ಲವೆಂದು ಹೇಳುತ್ತಾರೆ. 'Child is the father of the man' ಎಂದು ಹೇಳುತ್ತಾರೆ. I am a son of farmer but my son is not a farmer ಈವತ್ತಿನ ದಿವಸ ಎಷ್ಟೋ ಜನ ಈ ವೃತ್ತಿಯನ್ನು ಕಡೆಗಾಣಿಸುವ ಪರಸ್ಥಿತಿಯನ್ನು ಇಂದು ನಾವು ಕಾಣುತ್ತಿದ್ದೇವೆ. ನಾನು ಈ ಸದಸನದಲ್ಲಿ ಸೂಚಿಸತಕ್ಕಂತದ್ದು ಏನೆಂದರೆ ಪ್ರಾಥಮಿಕ ಶಿಕ್ಷಣದ ಹಂತದಲ್ಲಿಯೇ ತಾಂತ್ರಿಕ ಜ್ಞಾನವನ್ನು ಬೋಧಿಸತಕ್ಕ ಪಠ್ಯ ಪುಸ್ತಕಗಳ ಒಂದು ವ್ಯವಸ್ಥೆಯನ್ನು ಮಾಡಬೇಕು. ಈಗಿನ ಶಿಕ್ಷಣದ ಪಠ್ಯಪುಸ್ತಕಗಳನ್ನು ನೋಡಿದರೆ ಎಷ್ಟು ಪುಸ್ತಕಗಳನ್ನೂ ಓದಿದರೂ ಬರಲಾರದು ಎಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ನಮ್ಮ ವಿದ್ಯಾ ಇಲಾಖೆಯವರು ಒಂದು ಟೆಕ್ನಾಲಜಿ ರೀಸರ್ಚ್ ಸೆಲ್ ಒಂದು ರಚನೆ ಮಾಡಿ ಅದನ್ನು ಸಮರ್ಥ ರೀತಿಯಲ್ಲಿ ಕೆಲಸ ಮಾಡುವಂತೆ ನೋಡಿಕೊಳ್ಳಬೇಕು. ಅದಕ್ಕೆ ಹೊಂದಿಕೊಳ್ಳತಕ್ಕಂಥ ಪಠ್ಯ ಪುಸ್ತಕಗಳನ್ನು ಹೊರತರುವ ವಿಚಾರವನ್ನು ಮಾಡಬೇಕೆಂದು ಹೇಳುತ್ತೇನೆ. ಸ್ವಾತಂತ್ರ್ಯ ನಂತರ ಭಾರತ ದೇಶದಲ್ಲಿ ತೀವ್ರಗತಿಯಿಂದ ವಿದ್ಯಾಭಿವೃದ್ಧಿಯಾಗುತ್ತದೆ. ಪ್ರಗತಿ ಕಾಲದಲ್ಲಿ ದಿನೇ ದಿನೇ ಬದಲಾವಣೆಯನ್ನು ಹೊಂದುತ್ತಿರುವ ಪರಿಸ್ಥಿತಿಯಲ್ಲಿ ಅದಕ್ಕೆ ಅನುಗುಣವಾದ ಹಾಗೂ ಅಗತ್ಯವಿದ್ದ ವಿದ್ಯಾ ಜ್ಞಾನದ ಬೇಡಿಕೆಗಳು ಬೆಳೆದು ಬಂದಿವೆ. ಭಾರತದ ಗ್ರಾಮೀಣ ರೈತರ ಮಕ್ಕಳಿಗೆ ಹೆಚ್ಚಿನ ತರಬೇತಿ ಕೊಟ್ಟು ಮರಳಿ ತಮ್ಮ ಮನೆಗಳಿಗೆ ಹೋಗಿ ಪರಿಣಾಮಕಾರಿಯಾಗಿ ತನ್ನ ಅನುಕೂಲ ಕಸಬು, ಉದ್ಯೋಗ ಕೈಕೊಳ್ಳದಿರುವ, ಕುಟುಂಬ ಅಭಿವೃದ್ಧಿಗೆ ಅಗತ್ಯವಿದ್ದ ವಿಸ್ತರಣೆ

ಜ್ಞಾನವನ್ನು ಕೊಡದಿರುವ ಯಾವುದೇ ಶೈಕ್ಷಣಿಕ ಪದ್ಧತಿಯೂ ನಮ್ಮ ದೇಶದಲ್ಲಿ ಸಮಾಧಾನಕಾರಕ ಹಾಗೂ ಸಮಂಜಸವಾಗಲಾರದು ಎಂದು ಒಬ್ಬರು ಹೇಳಿದ್ದಾರೆ. ಆ ಒಂದು ದಿಸೆಯಲ್ಲಿ ಪ್ರಾಥಮಿಕ ಶಾಲಾ, ಪ್ರೌಢ ಶಾಲಾ ಮತ್ತು ವಿಶ್ವವಿದ್ಯಾಲಯದ ಮಟ್ಟದಲ್ಲಿ ಆಗಬೇಕೆಂದು ಹೇಳುತ್ತೇನೆ. ಪ್ರಾಥಮಿಕ ಶಾಲಾ ಶಿಕ್ಷಣ ಏತಕ್ಕೆ ಇಷ್ಟೊಂದು ಮಹತ್ವವೆಂದರೆ ಭಾರತ ದೇಶದಲ್ಲಿ ಶಿಕ್ಷಣದ ಹೊಸ ಮನ್ವಂತರ ಪೀಠಿಕೆಯನ್ನು ಹಾಕುವ ಶಿಕ್ಷಣದ ಪದ್ಧತಿಯು ಅವಶ್ಯವಿದೆ. ಪ್ರೌಢ ವಿದ್ಯಾಲಯ, ಹೈಸ್ಕೂಲ, ಕಾಲೇಜ್, ವಿಶ್ವವಿದ್ಯಾನಿಲಯಗಳಿಗಿಂತಲೂ ಪ್ರಾಥಮಿಕ ಮಟ್ಟದಲ್ಲಿ ಕಲಿತ ವಿದ್ಯೆಯು ಬೀಜ ರೂಪದಂತಿದ್ದು, ಪ್ರೌಢ ವಿದ್ಯಾ ಮಟ್ಟದಲ್ಲಿ ವಿದ್ಯಾರ್ಥಿಯು ವಿಶೇಷ ಶಿಕ್ಷಣದ ನೆರವಿಲ್ಲದೆ ತನ್ನಲ್ಲಿ ಅಂಕುರಿಸಿದ ಜ್ಞಾನವನ್ನು ವಿಸ್ತರಿಸಲು, ವರ್ಧಿಸಲು ಸಾಧ್ಯ. ಅದಕ್ಕಾಗಿ ಪ್ರಾಥಮಿಕ ಶಾಲೆಯಿಂದಲೇ ಈ ಒಂದು ಕಾರ್ಯ ಮುಂದುವರೆಯಬೇಕೆಂದು ಹೇಳುತ್ತೇನೆ. ಕ್ವಾಲಿಟಿ ಇಂಪ್ರೂವ್ಮೆಂಟ್ ಇನ್ ಎಜ್ಯೂಕೇಷನ್ ವಿಚಾರ ತೆಗೆದುಕೊಂಡರೆ ನಗರಗಳಲ್ಲಿ ಬಹಳಷ್ಟು ಅನುಕೂಲತೆ ಇದೆ. ಅದೇ ರೀತಿ ಗ್ರಾಮಾಂತರ ಪ್ರದೇಶಗಳಲ್ಲಿರುವ ಮಕ್ಕಳಿಗೆ ರೂರಲ್ ಏರಿಯಾದ ಮಕ್ಕಳಿಗೆ ಸಾಧ್ಯವಿದ್ದಲ್ಲೆಲ್ಲ ಅಗ್ರಿಕಲ್ಚರ್ ಬಾಯ್ಸ್ ಸ್ಕೂಲ್‌ಗಳನ್ನು ಪ್ರಾರಂಭಿಸಬೇಕೆಂಬ ಒಂದು ವಿಚಾರ ಇಟ್ಟುಕೊಳ್ಳಬೇಕು.

ಇನ್ನೊಂದು ವಿಚಾರವೆಂದರೆ ಹಿಂದುಳಿದ ಹಳ್ಳಿಗಳಲ್ಲಿ, ಹಿಂದುಳಿದ ತಾಲ್ಲೂಕುಗಳಲ್ಲಿ ಟೆಲಿವಿಜನ್ ಕಾರ್ಯಚರಣೆಯ ಅಗತ್ಯ ಬಹಳಷ್ಟು ಇರುತ್ತದೆ. ನಮ್ಮ ಬಿಜಾಪುರ ಜಿಲ್ಲೆಯಲ್ಲಿ ಅನೇಕ ಟೆಲಿವಿಜನ್‌ಗಳು ಕೆಲಸ ಮಾಡುತ್ತಿವೆ. ಮಕ್ಕಳ ಕಾರ್ಯಕ್ರಮ, ವಯಸ್ಕರ ಕಾರ್ಯಕ್ರಮಗಳಿಗೆ ಇದರಿಂದ ಅವಕಾಶ ಸಿಕ್ಕುತ್ತದೆ. ಆದ್ದರಿಂದ ಇದನ್ನು ಇನ್ನು ಮುಂದೆ ಮುಂದುವರೆಸಿಕೊಂಡು ಹೋಗಬೇಕೆಂದು ಕೇಳಿಕೊಳ್ಳುತ್ತೇನೆ.

ನಮ್ಮ ರಾಜ್ಯದಲ್ಲಿ ಮೂರು ವಿಶ್ವವಿದ್ಯಾನಿಲಯಗಳು ಇವೆ. ಈ ವಿಶ್ವವಿದ್ಯಾನಿಲಯಗಳಿಗೆ ಕೊಡತಕ್ಕಂತ ಗ್ರ್ಯಾಂಟ್ ಸ್ನಾತಕೋತ್ತರ ವ್ಯಾಸಂಗಕ್ಕೆ ಬರತಕ್ಕಂತ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಇರುವುದಿಲ್ಲ. ಅಲ್ಲದೇ ಮೂರು ವಿಶ್ವವಿದ್ಯಾನಿಲಯಗಳಿಗೂ ಗ್ರ್ಯಾಂಟ್‌ನ್ನು ಸಮನಾಗಿ ಹಂಚುತ್ತಿಲ್ಲ. ವಿದ್ಯಾರ್ಥಿಗಳ ಪ್ರಮಾಣಕ್ಕೆ ಅನುಸಾರಾಗಿ ಗ್ರ್ಯಾಂಟನ್ನು ಕೊಡದಿದ್ದರೆ ಅದು ಸರಿಯಾಗಿ ನಡೆಯುವುದಿಲ್ಲವೆಂದು ಹೇಳಬೇಕಾಗುತ್ತದೆ.

**ಶ್ರೀ ಎಂ. ಮಲ್ಲಿಕಾರ್ಜುನ ಸ್ವಾಮಿ**– ಪ್ರಮಾಣವನ್ನು ಅನುಸರಿಸಿಯೇ ಗ್ರ್ಯಾಂಟ್‌ನ್ನು ಕೊಡುತ್ತಿದ್ದೇವೆ.

**ಶ್ರೀ ಬಿ.ಎಂ. ಹೊರಕೇರಿ**– ಆ ರೀತಿ ಕೊಡುತ್ತಿದ್ದರೆ ಒಳ್ಳೆಯದು. ಮತ್ತೊಂದು ವಿಷಯವೆಂದರೆ ಮಹಾರಾಷ್ಟ್ರದಲ್ಲಿ ಅಭಯಂಕರ್ ಅವರ ನೇತೃತ್ವದಲ್ಲಿ ಯುವಕರಿಗಾಗಿ ಒಂದು ಕಾಲೇಜ್‌ನ್ನು ನಡೆಸುತ್ತಿದ್ದಾರೆ. ಅಲ್ಲಿ ಯುವಕರು ಬಿಡುವಿನ ಕಾಲದಲ್ಲಿ ಸಂಘಟನೆ ಮಾಡತಕ್ಕಂತ ಅನೇಕ ರಚನಾತ್ಮಕವಾದ ಕಾರ್ಯಗಳನ್ನು ಮಾಡುತ್ತಿದ್ದಾರೆ. ಹಾಗೆ ಮಾಡುವುದರಿಂದ ಯುವಕರಿಗೆ ಶ್ರಮದಾನದ ಮಹತ್ವ ಗೊತ್ತಾಗುತ್ತದೆ. ಸಾರ್ವಜನಿಕ ಕೆಲಸ ಮಾಡಲಿ ಒಂದು ರೀತಿಯಾದ ರಚನಾತ್ಮಕ ಸೇವಾ ಭಾವನೆಯೂ ಬರುತ್ತದೆ. ಅಂತಹ ಕಾಲೇಜ್‌ಗಳನ್ನು ನಮ್ಮ ರಾಜ್ಯದಲ್ಲಿ ಪ್ರಾರಂಭ ಮಾಡಿದರೆ ಒಳ್ಳೆಯದೆಂದು ತಮ್ಮ ಮುಂದೆ ಹೇಳುವುದಕ್ಕೆ ಇಚ್ಛೆ ಪಡುತ್ತೇನೆ.

ಮತ್ತೊಂದು ವಿಚಾರ ಸನ್ಮಾನ್ಯ ವಿದ್ಯಾಸಚಿವರಲ್ಲಿ ಅರಿಕೆ ಮಾಡಿಕೊಳ್ಳುವುದೇನೆಂದರೆ ಕಿತ್ತೂರು ರಾಣಿ ಚೆನ್ನಮ್ಮ ರೆಸಿಡೆನ್ಸಿಯಲ್ ಸ್ಕೂಲ್ ಫಾರ್ ಗರ್ಲ್ಸ್ ಎಂದು ಇರುತ್ತದೆ. ಇದರ ಬಗ್ಗೆ ಒಂದು ಮಹತ್ವದ ವಿಚಾರ ಹೇಳಬೇಕಾಗಿದೆ. ನಮ್ಮ ಭಾರತದಲ್ಲಿ ಪ್ರಪ್ರಥಮವಾಗಿ ಸ್ವಾತಂತ್ರದ ಪ್ರಥಮ ಹೆಜ್ಜೆಯನ್ನು ಇಟ್ಟದ್ದು ಎಂದರೆ ಕರ್ನಾಟಕದ ರಾಣಿ ಕಿತ್ತೂರು ಚೆನ್ನಮ್ಮ ಇವರ ಐತಿಹಾಸಿಕ ವಿಚಾರವನ್ನು ತಿಳಿದುಕೊಳ್ಳಲು ವಿದ್ಯಾ ಇಲಾಖೆಯವರು ಕಿತ್ತೂರಿನಲ್ಲಿ ರಾಣಿ ಚೆನ್ನಮ್ಮನವರ ಸ್ಮಾರಕ ರೀತಿಯಲ್ಲಿ ಒಂದು ಸಂಸ್ಥೆಯನ್ನು ಸ್ಥಾಪನೆ ಮಾಡಿ, ಅಲ್ಲಿ ಸೈನಿಕ ಶಿಕ್ಷಣವನ್ನು ಕೊಡುತ್ತಿದ್ದಾರೆ. ಇದು ಕರ್ನಾಟಕ ರಾಜ್ಯಕ್ಕೆ ಅಷ್ಟೇ ಅಲ್ಲ ಇಡೀ ಭಾರತ ದೇಶದಲ್ಲಿ ಇಂತಹದ್ದೇ ಶಾಲೆಗಳನ್ನು ಸ್ಥಾಪನೆ ಮಾಡಿ ಹೆಣ್ಣು ಮಕ್ಕಳಿಗೆ, ಮಧ್ಯಮ ವರ್ಗದ ಕುಟುಂಬದವರ ಮಕ್ಕಳಿಗೆ ಅವರ ಒಂದು ವಿಚಾರ ಜ್ಞಾನ, ಅಭ್ಯಾಸ ಮಾಡಿಸುವುದು. ನಿಜವಾಗಿಯೂ ನಮ್ಮ ರಾಷ್ಟ್ರಕ್ಕೆ ಬಹಳ ಮಹತ್ವದ ವಿಚಾರವಾಗುತ್ತದೆ.

**4–00 P.M.**

ಅದಕ್ಕಾಗಿ ಕೇವಲ 3 ಲಕ್ಷ ರೂಪಾಯಿಗಳನ್ನು ಮಾತ್ರ ಈ ವರ್ಷದ ಬಜೆಟ್‌ನಲ್ಲಿ ಕಾಣಿಸಿದ್ದಾರೆ. ಅದಕ್ಕಾಗಿ ಅನೇಕ ಮಾಸ್ಟರ್

ಪ್ಲಾನ್‌ಗಳನ್ನು ಮಾಡಿಕೊಂಡಿದ್ದಾಗಿದೆ. ಈ ಮಾಸ್ಟರ್ ಪ್ಲಾನ್‌ಗಳ ಗೊತ್ತು ಗುರಿಗಳನ್ನು ಮುಟ್ಟುವ ಹಾಗೆ ನಮ್ಮ ರಾಜ್ಯ ಸರ್ಕಾರದವರು ತೀವ್ರ ಗತಿಯಲ್ಲಿ ಕೆಲಸ ಮಾಡಿ ಅದು ಸಫಲವಾಗುವಂತೆ ಮಾಡಿದರೆ ಅದು ಒಂದು ಮಹತ್ವದ ಕಾರ್ಯ ಎಂದೆನಿಸುತ್ತದೆ. ನಮ್ಮ ಕರ್ನಾಟಕ ರಾಜ್ಯದಲ್ಲಿ ಅನೇಕ ಮಂದಿ ವೀರ ಮಹಿಳೆಯರು ಇದ್ದರು. ಓಬವ್ವ, ಬೆಳವಡಿ ಮಲ್ಲಮ್ಮ, ಕಿತ್ತೂರು ರಾಣಿ ಚೆನ್ನಮ್ಮ ಮುಂತಾದ ವೀರ ಮಹಿಳೆಯರ ಹೆಸರುಗಳು ನಮ್ಮ ರಾಷ್ಟ್ರದಾದ್ಯಂತ ಹಬ್ಬಬೇಕಾಗಿದೆ. ಮುಖ್ಯವಾಗಿ ಮಕ್ಕಳ ಓದಿನಲ್ಲಿ ಈ ವಿಚಾರ ಬಂದರೆ ಅವರ ಮನೋಭಾವ ಒಳ್ಳೆಯ ರೀತಿಯಲ್ಲಿ ಬೆಳೆಯುತ್ತಾ ಬರುತ್ತದೆ. ಇದರಿಂದ ಹೆಚ್ಚು ಅನುಕೂಲವಾಗುತ್ತದೆ. ಸೈನಿಕ ಸ್ಕೂಲಗಳ ಮಕ್ಕಳಿಗೆ ರಕ್ಷಣಾ ಇಲಾಖೆಯಿಂದ ರಾಜ್ಯ ಸರ್ಕಾರದವರು ಸ್ಕಾಲರ್‌ಶಿಪ್‌ಗಳನ್ನು ಕೊಡುತ್ತಿದ್ದಾರೆ. ಅದು ಒಳ್ಳೆಯದು ಭಾರತದಾದ್ಯಂತ ಎಲ್ಲಾ ಮಹಿಳೆಯರಿಗೆ ಶಿಕ್ಷಣ ಪಡೆಯುವುದಕ್ಕೆ ಅವಕಾಶ ಇರಬೇಕೆಂದು ಹೇಳುತ್ತೇನೆ. ಇದು ಕೇವಲ ರಾಜ್ಯ ಮಟ್ಟದ ವಿಚಾರವಲ್ಲ. ಇದು ಇಡೀ ಭಾರತದ ಮಟ್ಟದ ವಿಚಾರ ಈ ಒಂದು ಶಿಕ್ಷಣ ಶಾಲೆ ಕಿತ್ತೂರಿನಲ್ಲಿ ಪ್ರಾರಂಭವಾದದ್ದು ನಮ್ಮ ರಾಜ್ಯ ಸರ್ಕಾರದವರು ಅದನ್ನು ಮುಂದುವರೆಸಿಕೊಂಡು ಒಂದು ಸಂಸ್ಥೆಯಾಗಬೇಕೆಂದು ಈ ಒಂದು ವಿಚಾರವನ್ನು ತಮ್ಮ ಮುಂದೆ ಹೇಳುತ್ತಿದ್ದೇನೆ. ಇನ್ನು ಉಳಿದ ವಿಚಾರವೆಂದರೆ ನಮ್ಮ ಪ್ರಾಥಮಿಕ ಮಟ್ಟದಲ್ಲಿ ಮತ್ತು ಕಾಲೇಜುಗಳ ಮಟ್ಟದಲ್ಲಿ ಮಕ್ಕಳಿಗೆ ಹೆಚ್ಚಿನ ವಿದ್ಯಾವಕಾಶ ಇರಬೇಕು. ಶಿಕ್ಷಕರ ಮೇಲೆ ಇನ್ಸ್‌ಪೆಕ್ಷನ್ ಇಟ್ಟು ಸರಿಯಾದ ಹತೋಟಿ ಇರಬೇಕು ಎಂಬುದಾಗಿ ಸರ್ಕಾರದವರು ಏನು ಯೋಚನೆ ಹಾಕಿಕೊಂಡಿದ್ದಾರೆ ಅದು ಸೂಕ್ತವಿದೆ. ಮತ್ತು ಅವರಿಗೆ ವಾಹನದ ಅವಶ್ಯಕತೆ ಇದೆ. ಎಂದು ಹೇಳುತ್ತೇನೆ. ಅಧ್ಯಕ್ಷರು ಈ ವಿಷಯವಾಗಿ ಮಾತನಾಡುವುದಕ್ಕೆ ಅವಕಾಶ ಕೊಟ್ಟದ್ದಕ್ಕಾಗಿ ಅವರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

* * * * *

# ಸಹಕಾರಿ ಬೇಸಾಯದ ಮೇಲಿನ ಚರ್ಚೆಯಲ್ಲಿ ಮಾಡಿದ ಭಾಷಣ

14.04.1976

**ಶ್ರೀ ಬಿ.ಎಂ. ಹೊರಕೇರಿ** (ಗುಳೇದಗುಡ್ಡ)-ಸನ್ಮಾನ್ಯ ಅಧ್ಯಕ್ಷರೆ ತಮ್ಮ ಅಪ್ಪಣೆ ಪಡೆದು ನನ್ನ ಈ ಖಾಸಗಿ ನಿರ್ಣಯುವನ್ನು ಈ ಸದನದ ಮುಂದೆ ಮಂಡನೆ ಮಾಡುತ್ತಿದ್ದೇನೆ.

'ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ಆರ್ಥಿಕವಾಗಿ ಸುಭದ್ರವಾಗಿರುವ ಸಹಕಾರಿ ಬೇಸಾಯ ಸಂಘಗಳು ವಿಶೇಷ ತಾಂತ್ರಿಕ ಹಾಗೂ ಹಣ ಸಹಾಯದೊಂದಿಗೆ ವಿಶೇಷ ಕಾರ್ಯಕ್ರಮವನ್ನು ದೃಷ್ಟಿಯಲ್ಲಿಟ್ಟುಕೊಂಡು ವ್ಯವಸಾಯ ಕಾರ್ಯಾಚರಣೆಯನ್ನು ತೀವ್ರ ಹಾಗೂ ಸಮಗ್ರ ರೀತಿಯಲ್ಲಿ ಅಭಿವೃದ್ಧಿಗೊಳಿಸುವ ಸಲುವಾಗಿ ಸದರಿ ಸಂಘಗಳನ್ನು ಪುನಃಶ್ಚೇತನಗೊಳಿಸಬೇಕೆಂದು ಈ ಸಭೆಯವರು ಸರ್ಕಾರದವರಿಗೆ ಶಿಫಾರಸ್ಸು ಮಾಡುತ್ತಾರೆ.

**Mr.Deputy Speaker** – Resolation moved

"This Asmebly recommends to Governament that the prospective exiting co-operative farming societies in the state be invitaeised with special programme of intensive and intergrated devolpments in agriculturel operations with special technical and financial assiatance."

**ಶ್ರೀ ಬಿ.ಎಂ. ಹೊರಕೇರಿ**– ಸ್ವಾಮಿ ನಮ್ಮ ಭಾರತ ದೇಶದಲ್ಲಿ ಸಹಕಾರಿ ಬೇಸಾಯ ಪದ್ಧತಿ ಮೊದಲಿನಿಂದಲೂ ಅಂದರೆ ಪ್ರಾಚೀನತೆಯಿಂದ ಬಳಕೆಯಲ್ಲಿ ಬಂದಿದೆ. ಇದಕ್ಕೆ ಉದಾಹರಣೆ ಕೊಡಬೇಕೆಂದರೆ, ವ್ಯವಸಾಯಗಾರರು ತಮ್ಮಲ್ಲಿ ಸಾಕಷ್ಟು ಉಳಿಮೆ ಮಾಡುವಂತಹ ಭೂಮಿ ಇಲ್ಲದಿದ್ದಾಗ ತಮ್ಮಲ್ಲಿರುವಂತಹ ಎತ್ತುಗಳನ್ನು ಚಕ್ಕಡಿ ಹಾಗೂ ಇತರೆ ಉಪಕರಣಗಳನ್ನು ಬೇರೆಯವರಿಗೆ ಕೊಡುವುದು ಅಥವಾ ಬೇರೆಯವರಿಂದ ತಾವು ಪಡೆದುಕೊಳ್ಳುವುದು ಈ ರೀತಿಯಿಂದ ಪರಸ್ಪರ ತಿಳುವಳಿಕೆ ಮೂಲಕ ರೈತರು ಹಿಂದಿನಿಂದಲೂ ಕೂಡೊಕ್ಕಲು ಸಾಗುವಳಿ ಮಾಡಿಕೊಂಡು ಬಂದಿದ್ದಾರೆ. ನಮ್ಮ ಬಿಜಾಪುರ ಜಿಲ್ಲೆಯಲ್ಲಿ ಒಣ ಬೇಸಾಯ ಭೂಮಿ ಇದೆ. ಅಂತಹ ಕಡೆಗಳಲ್ಲಿ ಒಂದು

ಜೊತೆ ಎತ್ತಿನಿಂದ 30-40 ಎಕರೆ ಭೂಮಿಯನ್ನು ಸಾಗುವಳಿ ಮಾಡಬಹುದು. ಆದರೆ ಒಬ್ಬ ರೈತನಲ್ಲಿ ಎಕರೆ 10-12 ಜಮೀನು ಮಾತ್ರವಿದ್ದರೆ ಎರಡು ಎತ್ತುಗಳ ಅವಶ್ಯಕತೆ ಇರುವುದಿಲ್ಲ. ಆಗ ಒಂದು ಎತ್ತನ್ನು ಇಟ್ಟುಕೊಂಡು ವ್ಯವಸಾಯ ಮಾಡುವುದು, ಹಾಗೆಯೇ ಕಾಳನ್ನು ಬಿತ್ತುವ ಕಾಲ ಬಂದಾಗ ಒಬ್ಬರಿಗೊಬ್ಬರು ಪರಸ್ಪರ ಸಹಾಯ ಮಾಡುವುದು ಮತ್ತು ಕೂಡಿಕೊಂಡು ಬೇಸಾಯ ಮಾಡುವಂತಹ ಪದ್ಧತಿ ಮೊದಲಿನಿಂದಲೂ ನಡೆದುಕೊಂಡು ಬಂದಿರುವಂತಹ ಪದ್ಧತಿಯಾಗಿದೆ. ನಮ್ಮ ಭಾರತ ದೇಶದಲ್ಲಿ ಸಹಕಾರಿ ಬೇಸಾಯದ ಆಂದೋಲನ ಪ್ರಾರಂಭವಾದಾಗ ದೇಶದ ಅಭಿವೃದ್ಧಿಗೆ ಇದು ಬಹಳ ಮಹತ್ವದ ಕಾರ್ಯಕ್ರಮವಾಗಿದೆ ಎಂದುಕೊಂಡು ಇದಕ್ಕೆ ಬಹಳ ಪ್ರೋತ್ಸಾಹ ಕೊಡಲಾಯಿತು. ಈ ಪದ್ಧತಿಯಿಂದ ಬಡ ಹಾಗೂ ಚಿಕ್ಕ ಹಿಡುವಳಿದಾರರಿಗೆ ಆರ್ಥಿಕವಾಗಿ ಅನುಕೂಲವಾಗುವುದಲ್ಲದೇ ದೇಶದ ಅಭಿವೃದ್ಧಿ ಆಗುತ್ತದೆಂದುಕೊಂಡು ಈ ಯೋಜನೆಗೆ ಎಲ್ಲರೂ ಬೆಂಬಲ ಕೊಟ್ಟರು. ಅದರಲ್ಲಿಯೂ ಮುಖ್ಯವಾಗಿ ರಾಷ್ಟ್ರೀಯ ಮಹಾಪುರುಷರಾದಂತಹ ಮಹಾತ್ಮ ಗಾಂಧೀಜಿಯವರು, ಗುರುದೇವ ಠಾಕೂರವರು, ಪಂ.ನೆಹರೂ ಅವರು ತುಂಬು ಹೃದಯದಿಂದ ಈ ಸಹಕಾರ ಬೇಸಾಯಕ್ಕೆ ಬೆಂಬಲ ಕೊಟ್ಟರು. ಮತ್ತು ನಮ್ಮ ದೇಶದ ಅರ್ಥಶಾಸ್ತ್ರಜ್ಞರಾದಂತಹ ಡಿ.ಆರ್.ಗಾಡ್ಗೀಳ್ ಅವರು ಸಹ ಈ ಕಾರ್ಯಕ್ರಮದ ಬಗ್ಗೆ ಒಳ್ಳೆಯ ಆಸ್ತೆಯುಳ್ಳವರಾಗಿದ್ದರು. ನಮ್ಮ ರಾಜ್ಯದಲ್ಲಿಯೂ ಸಹ ಮಾನ್ಯ ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಈ ಸಹಕಾರ ಬೇಸಾಯದ ಬಗ್ಗೆ ಒಂದು ಯೋಜನೆಯನ್ನು ತಯಾರು ಮಾಡಿ ಇದಕ್ಕೆ ಮೂಲ ಪೀಠಿಕೆ ಹಾಕಿ ಕೊಡಲಾಯಿತು. ಆದರೆ ಈ ವಿಚಾರದಲ್ಲಿ ಸಮಧಾನಕರವಾದಂತಹ ಪ್ರಗತಿಯಾಗದ ಕಾರಣ ನಾವು ನಿರೀಕ್ಷಿಸದಂತಹ ಫಲಿತಾಂಶವನ್ನು ಅದು ಕೊಡಲಿಲ್ಲವೆಂದು ಹೇಳಬಹುದು. ನಮ್ಮ ಸರ್ಕಾರದವರು 3ನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಸಹಕಾರ ಬೇಸಾಯು ಯೋಜನೆಗೆ ಸಾಕಷ್ಟು ಹಣದ ನೆರವನ್ನು ಒದಗಿಸುವುದರ ಮೂಲಕ ಅದನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಲು ಪ್ರಯತ್ನ ಮಾಡಿದರು. ಆದರೆ ಈ ಒಂದು ಕಾರ್ಯಕ್ರಮ ಮಂದಗತಿಯಿಂದ ನಡೆದುಕೊಂಡು ಬಂತು. ಮುಂದೆ ಜನತೆ ಹಾಗೂ ಸರ್ಕಾರದಲ್ಲಿ ಈ ಸಹಕಾರಿ ಬೇಸಾಯದ ಬಗ್ಗೆ ಅನಾಧಾರಣೇ ಮತ್ತು ಭಿನ್ನಾಭಿಪ್ರಾಯ ತಲೆದೋರುವಂತಾಯಿತು. ಈ ಸಹಕಾರಿ ತತ್ವದಲ್ಲಿ ಒಂದು ಮಾತನ್ನು ಹೇಳುತ್ತಾರೆ. ಏನೆಂದರೆ Every body work is

no body work ಎಂದು ಹಾಗೆಯೇ ಅದನ್ನು ಕನ್ನಡದಲ್ಲಿ ಹೇಳುವುದಾದರೆ ಆಳಿಗೆ ಆಳು ಕೂಡಿದರೆ ಮೇಳು ಆಗಲು ತಲೆಬ್ಯಾನಿಯಂತೆ ಹೀಗೆ ಕೆಲಸದಲ್ಲಿ ಅನ್ಯೆಕ್ಯತೆ ಬರುತ್ತದೆ. ಆದರೆ ತತ್ವದ ಪ್ರಕಾರ ಕೆಲಸವಾಗದೆ, ಒಬ್ಬರಿಗೊಬ್ಬರಿಗೆ ಭಿನ್ನಾಭಿಪ್ರಾಯ ಬಂದು ಈ ಸಹಕಾರಿ ಬೇಸಾಯ ಪದ್ಧತಿ ಯಶಸ್ವಿಯಾಗಲಿಲ್ಲವೆಂದು ಹೇಳಬಹುದು. ಇದಕ್ಕೆ ನಾನಾ ಕಾರಣಗಳು ಇವೆ. ಈ ಸಹಕಾರಿ ಬೇಸಾಯದ ಪದ್ಧತಿಯಲ್ಲಿ ಸಾಧಕ ಬಾಧಕಗಳೆರಡು ಉಂಟು. ನಾನು ಮೊದಲು ಬಾಧಕಗಳ ಬಗ್ಗೆ ಹೇಳಿ ನಂತರ ಸಾಧಕಗಳ ಬಗ್ಗೆ ಹೇಳುತ್ತೇನೆ. ಇದರಿಂದ ಆಗತ್ತಕ್ಕಂತ ಬಾಧಕಗಳೇನೆಂದರೆ ವೆಸ್ಪೆಡ್ [Vesped Intrest]ಇಲ್ಲದ ಕಾರಣ ಅದಕ್ಷತೆ ಮತ್ತು ಅಲಕ್ಷತನ ಬೆಳೆಯುತ್ತದೆ. ವ್ಯಕ್ತಿಗತವಾದಂತಹ ಉತ್ಸಾಹ ಕಡಿಮೆಯಾಗುತ್ತದೆ. ತನ್ನ ತನವೆನ್ನುವುದು ಕಡಿಮೆಯಾಗುತ್ತದೆ. ಇದರಿಂದ ಸಾಂದ್ರ ಬೇಸಾಯದ ಪದ್ಧತಿಯನ್ನು ಸಾಧಿಸುವುದು ಕಷ್ಟವಾಗಿದೆ. ಜೊತೆಗೆ ಬುದ್ಧಿ ಜೀವಿಗಳು ಅಶಿಕ್ಷಿತರನ್ನು ಶೋಷಣೆ ಮಾಡತಕ್ಕಂತ ಸಂದರ್ಭಗಳು ಸಹ ಇದರಲ್ಲಿ ಇರುತ್ತದೆ. ಇನ್ನು ಈ ಸಹಕಾರಿ ಬೇಸಾಯದ ಪದ್ಧತಿಯಿಂದ ಆಗತಕ್ಕಂತ ಸಾಧಕಗಳೆನೆಂದರೆ, 1. ಲೆಕ್ಕಾಚಾರದ ಹಿಡುವಳಿಗಳು ಇಲ್ಲದ ಕಾರಣ, ಅವು ಸಾಗುವಳಿ ಮಾಡುವುದಕ್ಕೆ ತೊಂದರೆಯಾಗುತ್ತದೆ. 2. ದೊಡ್ಡ ಪ್ರಮಾಣದ ಮೇಲಿಂದ ಅಂದರೆ ಸಮೂಹಿಕ ಸಾಗುವಳಿಯನ್ನು ಸಾಧಿಸುವುದಕ್ಕೆ ಸಾಧ್ಯವಿದೆ. 3. ಯಾಂತ್ರಿಕ ಸಾಗುವಳಿಗೆ ಅನುಕೂಲವಿದೆ. ಇದರಿಂದ ಸಮಯದ ಉಳಿತಾಯವಾಗುವುದಲ್ಲದೆ ಸಮಯಕ್ಕೆ ಸರಿಯಾಗಿ ಬಿತ್ತನೆ ಮಾಡುವುದಕ್ಕೆ ಸಾಧ್ಯವಿರುತ್ತದೆ ಅಲ್ಲದೆ ಬೆಳೆಯಾಗತಕ್ಕಂತ ಭರವಸೆಯೂ ಇರುತ್ತದೆ. 4. ಸುಧಾರಿಸಿದ ಸಾಗುವಳಿ ಮಾಡುವುದಕ್ಕೆ ಸಾಧ್ಯವಿರುತ್ತದೆ. 5. ವ್ಯವಸಾಯದ ಹುಟ್ಟುವಳಿಯನ್ನು ಪೇಟೆಗೆ ಸಾಗಿಸುವುದಕ್ಕೆ ಮಾರಾಟ ಮಾಡುವುದಕ್ಕೆ ಹಾಗೂ ಪೇಟೆಯಿಂದ ವ್ಯವಸಾಯಕ್ಕೆ ಗೊಬ್ಬರ ಅಗತ್ಯವಿರುವಂತಹ ಬೀಜ ಮುಂತಾದವುಗಳನ್ನು ತರುವುದಕ್ಕೆ ಸಾಧ್ಯವಿರುತ್ತದೆ. 6. ಹಣಕಾಸಿನ ಸಂಸ್ಥೆಗಳಿಂದ, ಬ್ಯಾಂಕಗಳಿಂದ ಸಕಾಲದಲ್ಲಿ ಸೋವಿ ಬಡ್ಡಿ ದರದಲ್ಲಿ ಹಣಕಾಸಿನ ನೆರವನ್ನು ಪಡೆಯಲು ಸಾಧ್ಯವಿರುತ್ತದೆ. 7. ವ್ಯವಸಾಯ ಕಾರ್ಮಿಕರಿಗೆ ಗೈನ್ ಫಾಲ್ ಎಂಪ್ಲಾಯಮೆಂಟ್– Gainful employment ಈ ಪದ್ಧತಿಯಿಂದ ಸಿಗುತ್ತದೆ. ಅದೇ ಸ್ವಂತವಾಗಿ ಕಡಿಮೆ ಜಮೀನಿದ್ದರೆ ವರ್ಷಪೂರ್ತಿ ಕೆಲಸವಿರುವುದಿಲ್ಲ. ಜೊತೆಗೆ ಈ ಪದ್ಧತಿಯಿಂದ ಸರಕಾರಕ್ಕೆ ಬರಬೇಕಾದಂತಹ

ಬಾಕಿ ಹಣ ಜಾಗ್ರತೆ ವಸೂಲಿಯಾಗುತ್ತದೆ. 8. ಈ ಪದ್ಧತಿಯಿಂದ ರೈತರನ್ನು ಭೇಟಿಯಾಗುವುದು ಸುಲಭ ಮತ್ತು ಜಮೀನಿನಲ್ಲಿ ಪ್ರಾತಕ್ಷಿಕ ಪ್ರಯೋಗಗಳನ್ನು ಏರ್ಪಡಿಸಲು ಸಾಧ್ಯವಾಗುತ್ತದೆ. 9. ಸರಕಾರದ ಧೋರಣೆಯನ್ನು ಕಾರ್ಯರೂಪದಲ್ಲಿ ತರುವುದಕ್ಕೆ ಸುಲಭವಾಗುತ್ತದೆ. 10. ಸರಕಾರಕ್ಕೆ ಅಗತ್ಯವಾದಂತಹ ಖಾತ್ರಿ ಅಂಕಿ ಅಂಶಗಳನ್ನು ಪಡೆಯಲು ಈ ಪದ್ಧತಿಯಿಂದ ಅನುಕೂಲವಾಗುತ್ತದೆ. ಅದೇ ವ್ಯಕ್ತಿಗತವಾಗಿ ಇಂಡ್ಯೂಜವಲ್ ಆಗಿ ವ್ಯವಸಾಯ ಮಾಡುತ್ತಿದ್ದರೆ ಸರಿಯಾದಂತಹ ಅಂಕಿ ಅಂಶಗಳನ್ನು ಕಲೆಹಾಕುವುದಕ್ಕೆ ಆಗುವುದಿಲ್ಲ. 11. ಸಹಕಾರಿ ಬೇಸಾಯ ಸಂಘಗಳಿದ್ದರೆ ಸಾಗುವಳಿಗೆ ಆಗತಕ್ಕಂತಹ ಖರ್ಚನ್ನು ಮತ್ತು ಅದರಿಂದ ಬರತಕ್ಕಂತ ಉತ್ಪನ್ನವನ್ನು ಲೆಕ್ಕಾಚಾರ ಹಾಕಲು ಸುಲಭವಾಗುತ್ತದೆ. 12. ನಿಯಮಿತವಾಗಿ ಹೆಚ್ಚಿನ ಉತ್ಪಾದನೆಯಾಗುತ್ತದೆ. 13. ಈ ಬೇಸಾಯಗಾರರ ಜೀವನದ ಅಂತಸ್ತು ಹೆಚ್ಚುತ್ತದೆ. 14. ಮತ್ತೊಂದು ಮುಖ್ಯವಾದಂತಹ ಅಂಶವೆಂದರೆ ಇದರಿಂದ ಪ್ರಜಾಸತ್ತಾತ್ಮಕ ವಿಚಾರ ಅದರಲ್ಲಿ ಬೆಳೆಯಲು ಅವಕಾಶವಾಗುತ್ತದೆ. ತನ್ಮೂಲಕ ರಾಷ್ಟ್ರೀಯ ಮನೋಭಾವನೆ ಅವರಲ್ಲಿ ಬೆಳೆಯುತ್ತದೆ. ಇವೆಲ್ಲ ಕೆಲವು ಸಾಧಕಗಳು ಎಂದು ಹೇಳಬಹುದು.

ಇನ್ನು ಈ ಸಹಕಾರಿ ಬೇಸಾಯ ಕಾರ್ಯಕ್ರಮವನ್ನು ಪುನರ್ವಸತಿ ಯೋಜನೆ ಹಾಗೂ ಅಭಿವೃದ್ಧಿ ದಿಸೆಯಲ್ಲಿ ಕೈಕೊಳ್ಳಲಾಯಿತು. ಆದಕಾರಣ ಈ ಕಾರ್ಯಕ್ರಮದ ಸಾಧನೆಯನ್ನು ಒಂದು ವ್ಯವಹಾರಿಕ ದೃಷ್ಟಿಯಿಂದಾಗಲಿ ಅಥವಾ ಈ ದಿಸೆಯಲ್ಲಿ ಗುರಿ ಕಾಯಿಸಿದ ಹಣಕಾಸಿನ ಸಫಲತೆ, ಅದರ ಲಾಭ ನಷ್ಟಗಳ ಮೇಲೆ ಅಳತೆಮಾಡದೆ, ಈ ಕಾರ್ಯಕ್ರಮದಲ್ಲಿ ತೊಡಗಿದ ಬಡ ಕುಟುಂಬಗಳ ಉದ್ಯೋಗ ಹಾಗೂ ಅವರು ನಡೆಯಿಸಿದ ಜೀವನವನ್ನು ನಾವು ಲಕ್ಷಿಸಬೇಕಾಗಿದೆ. ಈ ಒಂದು ದಿಸೆಯಲ್ಲಿ ನಾವು ಈ ಹಿಂದಿನ ಕಾರ್ಯಕ್ರಮವನ್ನು ಸಿಂಹಾವಲೋಕನ ಮಾಡಿದಲ್ಲಿ ಕರ್ನಾಟಕ ರಾಜ್ಯದಲ್ಲಿ ತಾ॥ 30ನೇ ಜೂನ್ 1972ರ ಅವಧಿಗೆ 120 ಲಕ್ಷ ರೂಪಾಯಿಗಳಷ್ಟು ಆರ್ಥಿಕ ನೆರವನ್ನು ಸುಮಾರು 600 ಬೇಸಾಯ ಸಹಕಾರ ಸಂಘಗಳಿಗೆ ಕೊಡಲಾಗಿತ್ತು. ಒಟ್ಟು 67 ಸಾವಿರ ಎಕರೆ ಭೂಮಿಯ ಪೈಕಿ 40,423 ಎಕರೆ ಭೂಮಿಯಲ್ಲಿ ಈ ಸಂಘಗಳು ಸಾಗುವಳಿ ಮಾಡಿದವು. ಮತ್ತು ಸರ್ಕಾರದವರು ಪ್ರತಿ ಎಕರೆಗೆ 300 ರೂಪಾಯಿಗಳ ಪ್ರಕಾರ ನೆರವನ್ನು ಒದಗಿಸಿದ್ದರು. ಜೊತೆಗೆ ಈ ಸಂಘಗಳಲ್ಲಿ ತೊಡಗಿದ ಕುಟುಂಬಗಳ ಶ್ರಮ,

ಮಾನವೀಯ ಶಕ್ತಿ ಇವೆಲ್ಲವನ್ನು ಪರಿಗಣಿಸಿದಲ್ಲಿ ಎಕರೆಯೊಂದಕ್ಕೆ ಒಂದು ಸಾವಿರ ರೂಪಾಯಿಗಳಷ್ಟು ಸಾಗುವಳಿ ಖರ್ಚು ಬಂದಂತಾಗಿದೆ. ಸರ್ಕಾರದವರು ಒದಗಿಸಿದ ಈ ಹಣದಿಂದ ಸುಮಾರು 16,000 ಬಡ ಹಾಗೂ ಚಿಕ್ಕ ಹಿಡುವಳಿದಾರರಿಗೆ ಸಹಾಯ ಒದಗಿಸಿದಂತೆ ಆಯಿತು. ಮತ್ತು ಒಟ್ಟು ಅಂದಾಜು 290 ಲಕ್ಷ ರೂಪಾಯಿ ಹಣವನ್ನು 40,400 ಎಕರೆಯ ಮೇಲೆ ತೊಡಗಿಸಿದಂತೆ ಆಯಿತು. ಅಂದರೆ ಪ್ರತಿ ಎಕರೆಗೆ 600 ಗಳ ಪ್ರಕಾರ ಸಾಗುವಳಿಗಾಗಿ ತೊಡಗಿಸಿದಂತಾಯಿತು. ಮತ್ತು ಈ ಒಂದು ಕಾರ್ಯಕ್ರಮದ ಅಂಗವಾಗಿ ಪ್ರತಿ ಎಕರೆಯಲ್ಲಿ ಸರಾಸರಿ 3 ಕ್ವಿಂಟಲ್‌ನಷ್ಟು ವ್ಯವಸಾಯದ ಉತ್ಪನ್ನವನ್ನು ಹೆಚ್ಚಿಸಿದಂತೆ ಆಯಿತು. ಅಂದರೆ ಒಟ್ಟು 1,21,000ಕ್ವಿಂಟಲ್‌ನಷ್ಟು ವ್ಯವಸಾಯ ಉತ್ಪನ್ನವಾಗಿದೆ. ಇದರಿಂದ 121 ಲಕ್ಷ ರೂ. ಬೆಲೆ ಬಾಳುವಷ್ಟು ಆಹಾರ ಉತ್ಪಾದನೆಯಾದಂತಾಯಿತು. ಈ ಕ್ರಮದಿಂದ ಬಡ ಕುಟುಂಬದ ಜನರಿಗೆ ಒಂದು ಗೈನ್‌ಫುಲ್ ಎಂಪ್ಲಾಯುಮೆಂಟ್(Gainfull Employment) ಒದಗಿಸಿದಂತಾಯಿತಲ್ಲದೆ ಅವರಿಗೆ ತುಂಬಾ ಉಪಕಾರ ಮಾಡಿದಂತೆ ಆಗಿದೆ. ಇದರ ಜೊತೆಗೆ ಸಹಕಾರಿ ಬೇಸಾಯವು ಈ ಮೊದಲು ನಾನು ಹೇಳಿದ ಹಣದ ಗಾತ್ರದಿಂದ 40 ಸಾವಿರ ಎಕರೆಯಲ್ಲಿ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಅವಕಾಶವಾಯಿತಲ್ಲದೆ, ಬಡಜನತೆಗೂ ಪೂರ್ಣ ಉದ್ಯೋಗವನ್ನು ಕಲ್ಪಿಸುವುದಕ್ಕೆ ಅವಕಾಶವಾಯಿತು. ಹೀಗೆ ಇದು ನಾನಾ ರೀತಿಯಿಂದ ಉತ್ತೇಜನಕಾರಿಯಾಗಿದೆ. ಹೀಗೆ ಉದಾತ್ತಧ್ಯೇಯದಿಂದ ಪ್ರಾರಂಭವಾದ ಈ ಒಂದು ಕಾರ್ಯಕ್ರಮವು ಅನೇಕ ಕಾರಣಗಳಿಂದ ಇತ್ತೀಚೆಗೆ ಪ್ರಗತಿಯಾಗಲಿಲ್ಲ. ಅದಕ್ಕೆ ಕಾರಣಗಳು ಈ ರೀತಿಯಿದೆ.

1. want of awakening among illiterative small poor farmars, regarding advantage of co-operative forming.

2. Absence of farouable ideological atmaspere for co-operative farming.

3. Dearth of devoted deligent haol leadership to guide and maintaing co-operative farming eccietive

4. Lack of co-ordinated efforts and co-operative farming guidance.

ಈ ತರದ ಒಂದು ಮಾನ್ಯತೆ ಸಹಕಾರ ಸಂಘಗಳ ಮುಖಾಂತರ ಮಾಡುವ ಬೇಸಾಯ ಪದ್ಧತಿಗೆ ದೊರಕಬೇಕು. ಇಲ್ಲದೇ ಹೋದರೆ ಸಹಕಾರ ಬೇಸಾಯ ಪದ್ಧತಿ ಯಶಸ್ವಿಯಾಗದೆ ಇರುವುದಕ್ಕೆ ಸಾಧ್ಯವಾಗುತ್ತದೆಂದು ಹೇಳಬೇಕಾಗುತ್ತದೆ. ಈ ರೀತಿ ನಮ್ಮ ಸಹಕಾರ ಸಂಘಗಳನ್ನು ಮತ್ತು ಅದರ ಮುಖಾಂತರ ನಡೆಯುವ ರೀತಿಯಲ್ಲಿ ಇದನ್ನು ಪುನಃಶ್ಚೇತಗೊಳಿಸುವುದಕ್ಕೆ ಸರ್ಕಾರ ಅದರ ಒಂದು ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕು. ಉದಾಹರಣೆಗೆ ಹೇಳುವುದಾದರೆ ನಮ್ಮ ಸರ್ಕಾರದವರು ಏನು ಒಂದು ಫ್ಯಾಮಿಲಿ ಪ್ಲಾನಿಂಗ್ ಯೋಜನೆಯನ್ನು ಹೇಗೆ ಹಾಕಿಕೊಂಡಿದ್ದಾರೆ ಅದೇ ರೀತಿ ಇದಕ್ಕೂ ಒಂದು ಯೋಜನೆಯನ್ನು ಇಟ್ಟುಕೊಂಡು ಇದಕ್ಕೆ ತಜ್ಞರಲ್ಲಿ ಸಲಹೆ ಪಡೆದು ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಈ ಕಾರ್ಯವನ್ನು ಕೈಕೊಂಡಲ್ಲಿ ಜನರಲ್ಲಿ ಒಂದು ಜಾಗೃತಿ ಉಂಟಾಗುತ್ತದೆನ್ನುವ ಭರವಸೆ ನನಗೆ ಇದೆ. ಇನ್ನು ಮುಂದೆ ಬೇಸಾಯದಲ್ಲಿ ಇನ್ನು ಹೆಚ್ಚಿನ ಅಭಿವೃದ್ಧಿ ಮಾಡಬೇಕಾದರೆ ಮೊದಲು ಎಲ್ಲಾ ದೃಷ್ಟಿಯಿಂದಲೂ ಸಹಕಾರ ಬೇಸಾಯ ಕ್ರಮ ಯಶಸ್ವಿಯಾಗಬೇಕಾದರೆ ಇದಕ್ಕೆ ಒಂದು ಸಂಶೋಧನೆಯನ್ನು ತಜ್ಞರಿಂದ ಮಾಡಿಸಬೇಕು. ಜೊತೆಗೆ ಇದಕ್ಕೆ ಪರಿಹಾರವನ್ನು ಮತ್ತು ಪ್ರೋತ್ಸಾಹವನ್ನು ಒದಗಿಸುವಂತಹ ಪ್ರಚಾರ ಮಾಡತಕ್ಕಂತದ್ದು ಬಹಳ ಅವಶ್ಯಕ. ಬೇಸಾಯದಲ್ಲಿ ಪ್ರತ್ಯಕ್ಷ ಕಾರ್‍ಯಾಚರಣೆ ನೀಡುವಂತ ಸಂಸ್ಥೆಯನ್ನು ಮಾಡಬೇಕೆಂದು ಹೇಳುತ್ತೇನೆ. ಇದನ್ನು ಸುಮ್ಮನೆ ಯಾರೋ ಮಾಡತಕ್ಕಂತಹದ್ದಲ್ಲ. ಗ್ರಾಮೀಣ ರೈತರಿಗೆ ರೂರಲ್ ಅಗ್ರಿಕಲ್ಚರಲ್ ಬಗ್ಗೆ ಎಲ್ಲಾ ಮಟ್ಟದಲ್ಲಿ ಸಂಘಟನೆ ಮಾಡಬೇಕಾದರೆ ಸರಕಾರ ಸಿಬ್ಬಂದಿಯವರು ಜನತಾ ಪ್ರತಿನಿಧಿಗಳು ಇಬ್ಬರೂ ಇರಬೇಕು. ಹೀಗೆ ಸಹಕಾರ ಇಲಾಖೆಯಲ್ಲಿ ಮತ್ತು ಅಗ್ರಿಕಲ್ಚರ್ ಬಗ್ಗೆ ಎಲ್ಲಾ ವಿಚಾರವನ್ನು ಬಹಳ ಶಿಸ್ತಿನಿಂದ ತರಬೇತಿ ಕೊಡಬೇಕು. ಇದನ್ನು ಸಂಘಟನೆ ಮಾಡಬೇಕು. ರಾಜ್ಯ ಮಟ್ಟದಲ್ಲಿ ಸಂಘಟನೆ ಮಾಡಬೇಕಾದರೆ ಸರಕಾರ ಇಲಾಖೆ ಕೆಲಸ ಮಾಡಬೇಕು. ಏತಕ್ಕೆಂದರೆ ಈ ಬೇಸಾಯ ಕ್ರಮದಲ್ಲಿ ಅನುಭವ ಪಡೆದವರನ್ನು ಅಗಿಂದಾಗ ವರ್ಗ ಮಾಡಿದರೆ ಅದಕ್ಕೆ ಧಕ್ಕೆ ಬರುತ್ತದೆ. ಇನ್ನು ಕಲ್ಚರಲ್ ಇನ್‌ಕಾಂಟ್ಯಾಕ್ಸಿನಿಂದ ವಿಮುಕ್ತಿ ಅಗತ್ಯ. ಒಬ್ಬ ರೈತ ಫುಡ್ ಕ್ರಾಫ್ಸ್ ಆಹಾರೇತರ ಬೆಳೆ (Non food crops) ತೆಗೆಯಬೇಕಾದರೆ 3 ಎಕರೆಗಿಂತ ಹೆಚ್ಚಿಗೆ ದ್ರಾಕ್ಷಿ ಬೆಳೆದರೆ ಅದನ್ನು Eligeble for Income tax ಎಲಿಜೆಬಲ್ ಫಾರ್ ಇನ್‌ಕಮ್

ಟ್ಯಾಕ್ಸ್ ಈಗ ನೂರು ಎಕರೆ ಜಮೀನನ್ನು ಫಾರ್ಮಿಂಗ್ ಕೊಟ್ಟು ಅದರಲ್ಲಿ ದ್ರಾಕ್ಷಿ ಮೂರು ಎಕರೆಗಿಂತ ಹೆಚ್ಚಿಗೆ ಬೆಳೆದರೆ ಅದಕ್ಕೆ ಅಗ್ರಿಕಲ್ಚರ್ ಇನ್‌ಕಮ್ ಟ್ಯಾಕ್ಸ್ ಕೊಡಬೇಕೆಂದರೆ ಸಹಕಾರಿ ಬೇಸಾಯಕ್ಕೆ ನಿರಾಸೆ ನಿರುತ್ಸಾಹಿಯಾಗುತ್ತದೆ. ಆದ್ದರಿಂದ ಅದಕ್ಕೆ ವಿಮುಕ್ತಿ ಕೊಡಬೇಕಾಗುತ್ತದೆ. ಸರ್ಕಾರದಿಂದ ಸಿಕ್ಕತಕ್ಕಂತ ಸೌಲಭ್ಯಗಳನ್ನು ಬೇಸಾಯ ಸಹಕಾರ ಸಂಘಕ್ಕೆ ಕೊಟ್ಟರೆ ಒಳ್ಳೆಯದು. ಏತಕ್ಕೆಂದರೆ ಯಾವುದಾದರು ಸೌಲಭ್ಯ Individual (ವ್ಯಕ್ತಿಗೆ) ಕೊಡುವುದಕ್ಕಿಂತ ಸಹಕಾರ ಸಂಘಗಳ ಮುಖಾಂತರ ಕೊಟ್ಟರೆ ಆ ಸಂಘದಲ್ಲಿರುವವರಿಗೆಲ್ಲ ಆ ಲಾಭ ಸಿಕ್ಕುತ್ತದೆ. ಆದ್ದರಿಂದ ಬೇಸಾಯ ಸಹಕಾರಿ ಸಂಘಕ್ಕೆ ಪ್ರಾಧಾನ್ಯತೆ ಕೊಟ್ಟರೆ ಒಳ್ಳೆಯದು. ಇನ್ನು ನಮ್ಮ ಭಾಗದಲ್ಲಿ ವರಲಕ್ಷ್ಮಿ ಹತ್ತಿ ಬೆಳೆದವರಿಗೆ ಈ ಬೇಸಾಯ ಸಹಕಾರ ಸಂಘಗಳ ಮುಖಾಂತರ ಕೊಟ್ಟಿದ್ದರೆ ಎಲ್ಲರಿಗೆ ಲಾಭ ಸಿಕ್ಕುತ್ತಿತ್ತು. ಇನ್ನು ಈ ಬೇಸಾಯದಲ್ಲಿ ತಾಂತ್ರಿಕ ಜ್ಞಾನದ ನೆರವು ಸಿಕ್ಕುವಂತೆ ಬೇರೆ ಬೇರೆ ಅಭಿವೃದ್ಧಿ ಆಗುವಂತೆ ಈ ಮುಂದುವರಿದ ರೀತಿಯಲ್ಲಿ ನಮ್ಮ ಜನರಿಗೆ ಸಿಕ್ಕಬೇಕು. ಅದನ್ನು ನೀಡಿದರೆ ವ್ಯವಸಾಯದಲ್ಲಿ ಸಹಕಾರ ಮತ್ತು ಅಗ್ರಿಕಲ್ಚರ್ ಇಲಾಖೆಯವರ ಸಹಾಯ ಬಹಳ ಅವಶ್ಯವಾಗಿ ಬೇಕಾಗುತ್ತದೆ. ಈ ವ್ಯವಸಾಯವನ್ನು ಸಾಮಾನ್ಯ ಜನರು ಏನು ತಿಳಿದಿದ್ದಾರೆಂದರೆ ಇದು ಬರೀ ಡಲ್ಲರ್ಸ್(Dullers) ದಡ್ಡರ ಕೆಲಸ ಎಂದು ಇದು ವ್ಯಾಪಕವಾಗಿದೆ. ನಿಜವಾಗಿಯೂ ನೋಡುವುದಾದರೆ ಇದು ಬಹಳ ಡೇಡಿಕೇಟ್ (ನಾಜೂಕಾದ ಕೆಲ್ಸ) ಇದು ಥೇಯರಿ ಮತ್ತು ಪ್ರಾಕ್ಟಿಕಲ್ ಕೂಡಿದ್ದಾಗಿದೆ ಎಂದು ಹೇಳುವ ಹಾಗೆ ವ್ಯವಸಾಯ ಇಲಾಖೆಯವರು ಮುತುವರ್ಜಿವಹಿಸಿ ಕೆಲಸ ಮಾಡಬೇಕಾಗುತ್ತದೆ. ಇವರಿಗೆ ತಾಂತ್ರಿಕ ಜ್ಞಾನವನ್ನು ಕೊಡಬೇಕು. ಗ್ರಾಮಸೇವಕರಿಗೆ ವ್ಯವಸಾಯದ ಬಗ್ಗೆ ಸರಿಯಾದ ತರಬೇತಿಯನ್ನು ಕೊಟ್ಟು ಸಾಮಾನ್ಯ ರೈತರಿಗೆ ಇವರು ಡೆಮಾನಸ್ಟ್ರೇಷನ್ ಮಾಡಿ ತೋರಿಸುವ ರೀತಿಯಲ್ಲಿ ಇವರನ್ನು ತರಬೇತಿ ಮಾಡಿ ಕಳುಹಿಸಬೇಕಾಗುತ್ತದೆ. ಅವರು ಏನು ಸರ್ಕಾರ ಸರಕ್ಯೂಲರಿ ಏನು ಇದೆ ಆ ರೀತಿಯಲ್ಲಿ ಕೆಲಸ ಮಾಡಬೇಕಾಗುತ್ತದೆ. ಮುಂಜಾನೆ 8 ಗಂಟೆಗೆ ಬಂದು ಫಾರಂಗೆ ಹೋಗಿ ಫಿಲ್ಡ ಕಂಡಿಷನ್ ಅಬ್‌ಜರ್ವ್ ಮಾಡಬೇಕಾಗುತ್ತದೆ. ಎಲ್ಲಾ ಫಾರ್ಮಿಂಗ್ ಸೊಸೈಟಿಗಳು ಇರುವ ಜಾಗದಲ್ಲಿ ಡೆಮಾನ್‌ಸ್ಟ್ರೇಷನ್ ಸೆಂಟರ್ ಎಂದು ಆ ಭೂಮಿಯನ್ನು ಮಾಡಿದರೆ ಟೆಕ್ನಿಕಲ್ ನಾಲೆಜ್ಡ್ ಫಾರ್ಮಿಂಗ್‌ನಲ್ಲಿ ಬರಬೇಕು. ಇನ್ನು ಸರ್ಕಾರ ಮುಂದೆ ಒಂದು ವಿಚಾರ ಮಾಡಿ ಒಂದು ಸದ್ಭಾವನೆಯಿಂದ ಇದಕ್ಕೆ ಒಂದು ಯೋಜನೆ ಹಾಕಿದ್ದು 10–20ಕಡೆ ಪ್ರಾಕ್ಟಿಕಲ್ ಆಗಿ ನೋಡಿ ಮಾಡಿ ಅದರಿಂದ ಎಷ್ಟು

ಉಪಯೋಗ ಜನರಿಗೆ ದೊರಕುತ್ತದೆ ಮತ್ತು ಅದರಿಂದ ಎಷ್ಟು ಉತ್ಪಾದನೆ ಹೆಚ್ಚುತ್ತದೆಂದು ತಿಳಿಯುತ್ತದೆ. ನಾನು ಒಂದೆರಡು ಫಾರ್ಮಿಂಗ್ ಸೊಸೈಟಿಗಳನ್ನು ನಡೆಸುತ್ತಿದ್ದೇನೆ. ಸುಮಾರು 600 ಫಾರ್ಮಿಂಗ್ ಸೊಸೈಟಿಗಳು ರಾಜ್ಯದಲ್ಲಿ ಇವೆ. ಅವಕ್ಕೆ ಸರಿಯಾದ ಲೋಕಲ್ ಲೀಡರ್ ಶಿಪ್(ಸ್ಥಳೀಯ ಕಾರ್ಯಕರ್ತನಾಯಕರ ಅಭಾವವಿದೆ) ಇಲ್ಲದೆ ಇರುತ್ತವೆ. ಎಲ್ಲಿ ಸರಿಯಾದ ಕಾರ್ಯಕರ್ತರು ಇದ್ದಾರೆ ಅಂತಹ ಕಡೆ ಇದು ಬಹಳ ಯಶಸ್ವಿಯಾಗಿ ನಡೆಯುತ್ತದೆ. ಇವರಲ್ಲಿ ಎಲ್ಲ ಮೆಂಬರ್ಸನ್ನು ಕೆಲ್ಸದಲ್ಲಿ ತೊಡಗಿಸಿ ಎಕಾನಾಮಿಕಲ್ ಆಗಿ ಒಕ್ಕಲುತನವನ್ನು ನಡೆಯುವಂತೆ ಮಾಡಬೇಕು. ಅಲ್ಪ ಮಳೆಯಾಗತಕ್ಕ ನಮ್ಮ ಬಿಜಾಪುರ ಜಿಲ್ಲೆಯಲ್ಲಿ ಸಾಕಷ್ಟು ಇನ್‌ವೆಸ್ಟ ಮಾಡಿ ಲುಕ್ಸಾನು ಆಗಿದೆ. ಕಾರ್ಯಕರ್ತರಿಂದ ಸರಿಯಾಗಿ ತಾಂತ್ರಿಕ ಜ್ಞಾನ ಕೊಟ್ಟು ಇದು ಲೆಕ್ಕಾಚಾರವಾಗಿ ಎಕಾನಾಮಿಕ್ ಆಗಿ ಹೆಚ್ಚು ಉತ್ಪತ್ತಿ ಮಾಡತಕ್ಕಂಥ ಕಾರ್ಯಕರ್ತರ ಟ್ರೈನಿಂಗ್ ಅತ್ಯಗತ್ಯ ಎಂದು ಹೇಳುತ್ತಿದ್ದೇನೆ. ಹಾಗೆಯೇ ಅಭಿವೃದ್ಧಿ ಇಲಾಖೆ ಏನು ಇದೆ ಅದನ್ನು ಚೇತನ ಮಾಡಿದರೆ ಫಾರ್ಮಿಂಗ್ ಸೊಸೈಟಿಗಳು ಯಶಸ್ವಿಯಾಗುತ್ತವೆ. ಅದಕ್ಕೆ ಜನರನ್ನು ತಯಾರು ಮಾಡಬೇಕಾಗುತ್ತದೆ. ಇನ್ನು ಭೂ ಸುಧಾರಣೆ ಕಾಯ್ದೆ ನಮ್ಮಲ್ಲಿ ಕಾರ್ಯಗತ ಬಂದಾಗ ಸರ್‌ಪ್ಲಸ್ ಹೆಚ್ಚಿಗೆ ಭೂಮಿ ಇದೆ ಅದನ್ನು ಕೊಡುತ್ತಾರೆ. ಸಾಧಾರಣವಾಗಿ ಭೂಹೀನರಿಗೆ ನಾಲ್ಕಾರು ಎಕರೆಗೆ ಎಕಾನಾಮಿಕಲ್ ಹೋಲ್ಡಿಂಗ್ ಆದರೆ ಪ್ರತಿಯೊಂದು ಕುಟುಂಬಕ್ಕೂ ಒಂದು ಜೊತೆ ಎತ್ತುಗಳು ತೆಗೆದುಕೊಂಡರೆ ಅವನು ಸಾಗು ಮಾಡಲು ಲೆಕ್ಕಾಚಾರವಾಗುವುದಿಲ್ಲ. (Un-Econonic) ಇದೆಲ್ಲವನ್ನೂ ಕೂಡಿಸಿದರೆ ಅದು ಏನು ಅಷ್ಟು ಪ್ರಯೋಜನವಾಗುವುದಿಲ್ಲ. 1915ರಲ್ಲಿ ರಷ್ಯಾದಲ್ಲಿ ಆದಂತೆ ಆಗುತ್ತದೆ. ಇನ್ನು ಸರ್ವೀಸ್ ಸೊಸೈಟಿಗಳ ಪಾತ್ರ ಬರುತ್ತದೆ. ಸಿಕ್ಕ ಜನರನ್ನು ಇಟ್ಟುಕೊಂಡು ನಮ್ಮ ರಾಜ್ಯದಲ್ಲಿ ಈ ಸಹಕಾರ ಬೇಸಾಯವನ್ನು ಪುನಃಶ್ಚೇತನಗೊಳಿಸಬೇಕೆಂದು ಈ ಸಲಹೆಯನ್ನು ತಮ್ಮ ಮುಂದೆ ಇಟ್ಟು ಅಧ್ಯಕ್ಷರಿಗೆ ವಂದಿಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಕಾಗೋಡು ತಿಮ್ಮಪ್ಪ**-- ಮಾನ್ಯ ಅಧ್ಯಕ್ಷರೇ, ಮಾನ್ಯ ಹೊರಕೇರಿಯವರು ಇಟ್ಟಿರತಕ್ಕಂಥ ನಿರ್ಣಯ ಅತ್ಯಂತ ಸೂಕ್ತವಾದ ನಿರ್ಣಯವೆಂದು ನಾನು ಭಾವಿಸಿದ್ದೇನೆ. ಮಾನ್ಯ ಹೊರಕೇರಿಯವರು ಮಾತನಾಡುತ್ತಿದ್ದಂಥ ಕಾಲದಲ್ಲಿ ನನಗೆ ಇದ್ದಂತಹ ಕೆಲವು ಸಂಶಯಗಳನ್ನು ಅವರಿಗೆ ಕೇಳಿದೆ. ನಮ್ಮ ಹಿಂದುಳಿದ ಭಾಗಗಳಲ್ಲಿ ಈ ಸಹಕಾರ ಬೇಸಾಯ ಪದ್ಧತಿಯನ್ನು ತೀವ್ರ

ಗೊಳಿಸುವುದು ಬಹಳ ಅಗತ್ಯ. ಆದರೆ ಇದರಲ್ಲಿ ಒಂದು ಸಂಶಯವೇನೆಂದರೆ, ಸಹಕಾರ ಕ್ಷೇತ್ರಗಳ ಬಗ್ಗೆ ಮಾನ್ಯ ಸದಸ್ಯರು ತಳೆದಿರುವ ನಿರ್ಣಯದ ಪ್ರಕಾರ ಸರ್ಕಾರ ಕ್ರಮವನ್ನು ತೆಗೆದುಕೊಳ್ಳಬೇಕಾಗಿದೆ. ಅದರ ಬಗ್ಗೆ ವಿಶೇಷವಾಗಿ ಅಗ್ರಿಮೆಂಟ್ ಏನಿದೆಯೋ ಅದನ್ನು ಗಮನದಲ್ಲಿಟ್ಟುಕೊಂಡು ವ್ಯವಸಾಯ ಕಾರ್ಯಾಚಾರಣೆ ತೀವ್ರವಾಗಿ ಮಾಬೇಕಾಗಿದೆ. ಅದಕ್ಕಾಗಿ ಈ ಸಭೆಯುವರು ಶಿಫಾರಸ್ಸು ಮಾಡಬೇಕಾಗಿದೆ. ಈಗ ನಾಡಿನಲಿ ಹಾಲಿ ಇರತಕ್ಕ ಬೇಸಾಯ ಸಂಘಗಳು ಏನಿವೆಯೋ ಅವುಗಳನ್ನು ಹೆಚ್ಚು ಕಡಿಮೆ ಪುನಶ್ಚೇತನಗೊಳಿಸಬೇಕಾದುದು ಮತ್ತು ಅದರ ಒಂದು ಮೂಲಭೂತ ಕಲ್ಪನೆ ಈ ನಿರ್ಣಯದಲ್ಲಿರತಕ್ಕದ್ದು. ಈಗ ಅಸ್ತಿತ್ವದಲ್ಲಿರತಕ್ಕ ಸಹಕಾರ ಬೇಸಾಯ ಸಂಘಗಳು ಏನಿವೆಯೋ ಅವು ನಡೆಸತಕ್ಕ ಕಡಿಮೆ ವರ್ಗದವುಗಳಾಗಿ ಈಗಿನ ಒಂದು ಕಾನೂನಿಂದ ತಪ್ಪಿಸಿಕೊಳ್ಳುವುದಕ್ಕೆ ಮತ್ತು ಯಾವುದೇ ಒಂದು ರೀತಿಯಲ್ಲಿ ಪ್ರತಿನಿಧಿಗಳನ್ನು ಪಡೆಯತಕ್ಕ ಸಂಘಗಳಾಗಿವೆ. ಇದೇ ಹೆಚ್ಚಾಗಿರತಕ್ಕ ಪ್ರಸಂಗವೆಂದು ನಾನು ತಿಳಿದುಕೊಂಡಿದ್ದೇನೆ.

**ಶ್ರೀ ಬಿ.ಎಂ. ಹೊರಕೇರಿ**– ಹಿಂದೆ ಒಂದು ಸಾರಿ ಕೋ–ಆಪರೇಟಿವ್ ಫಾರ್ಮಿಂಗ್ ಎಂದರೇನು ಎಂಬ ಬಗ್ಗೆ ನೆಹರೂ ಅವರೇ ಒಂದು ಮಾತನ್ನು ಹೇಳಿದ್ದಾರೆ. ಸಾಮಾನ್ಯವಾಗಿ ಹಿಂದು ಮನೆತನದಲ್ಲಿ 3–4–5 ಜನರು ಒಂದು ಎಕರೆ ಜಮೀನು ಇಟ್ಟುಕೊಂಡು ಅನ್‌ಡಿವೈಡೆಡ್ ಹಿಂದೂ ಫ್ಯಾಮಿಲಿಯಾಗಿದ್ದುಕೊಂಡು ಕೊನೆಯಲ್ಲಿ ಭಿಕ್ಷುಕರು ಆಗಿರುವುದೂ ಉಂಟು.

**Sri Kagodu Thimmappa**- You must take at least the spirit of the resolution

**Sri K.H. Ranganath**- Time an again I am telling that must of there societies area  not working good condition.

**ಶ್ರೀ ಬಿ.ಎಂ. ಹೊರಕೇರಿ**– ಸನ್ಮಾನ್ಯ ಅಧ್ಯಕ್ಷರೆ ಈಗ ಮಾನ್ಯ ಸಚಿವರು ಸೂಕ್ತವಾದ ವಿಚಾರ ಹೇಳಿದರು. ನನ್ನ ವಿಚಾರ ಇದ್ದುದು ಇದೆ. ಇಂತಹ ಸಹಕಾರ ಸಂಘಗಳ ವರ್ಕಿಂಗ್ ಏನು ಇದೆ ಇದರ ಬೋನಾಫೈಡ್ಸ್‌ನ್ನು ಪರಿಶೀಲಿಸಬೇಕೆಂದು ಈ ನಿರ್ಣಯವನ್ನು ಮಂಡಿಸಿದ್ದೆ. ಈಗ ನಾನು ತಮ್ಮ ಮುಂದೆ ಮಂಡಿಸಿದ ಈ ಖಾಸಗಿ ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳುತ್ತೇನೆ.

*   *   *   *   *

# ಕೃಷಿ ಇಲಾಖೆಯಲ್ಲಿನ ಕೃಷಿ ಸಹಾಯಕರ ಕುರಿತು

13.06.1977

**ಶ್ರೀ ಬಿ.ಎಂ. ಹೊರಕೇರಿ ಅವರ ಪ್ರಶ್ನೆಗಳು**

[a] whether is a proposal to make the Cadres of Fit Assistants on par with Agricultural Assistants;

[b] if sowhether all the Field Assistants working in the Department of Agriculture are triated as Agricultural assistants,

[c] whether the Seniority list of Agricultural Assistants a Field Assistants appointed ofter 1st November 1935has been prepared and published;

[d] if not, why it is delayed and what are the difficulties and when the list will be finally published?

**ಶ್ರೀ ಎನ್. ಚಿಕ್ಕೇಗೌಡ (ಕೃಷಿ ಮಂತ್ರಿಗಳು)**

[a] and [b] Revise 1 pay scales made effctive from 1st January 1977provided for the same scale for Field Assistants and Agriculture Assistant. A recommendation has been made the Field assiatant should be given training to bring them on par with Agriculture Assistants. This matter is under consideration.

[c] yes howerea such listneed not be published?

The lists are kept in the Dirictorate

[d] Does not arise.

**ಶ್ರೀ ಬಿ.ಎಂ. ಹೊರಕೇರಿ**– ಸ್ವಾಮಿ, ತಮ್ಮ ಉತ್ತರದಲ್ಲಿ ಕ್ಷೇತ್ರ ಸಹಾಯಕರಿಗೆ ತರಬೇತಿ ಮಾಡುವಂತೆ ಆಯೋಗ ಶಿಫಾರಸ್ಸು ಮಾಡಲಾಗಿದೆ ಎಂದುಕೊಟ್ಟಿದ್ದೀರಿ. ಈಹೊತ್ತು ಫೀಲ್ಡ್ ಅಸಿಸ್ಟೆಂಟ್ 9 ತಿಂಗಳು 24 ತಿಂಗಳು ವಕ್ಕಲು ಕ್ಷೇತ್ರದ ವಿಚಾರದಲ್ಲಿ ಸ್ಟೈಫಿಂಗ್ ಪಡೆದು ಬಂದು, ಸುಮಾರು 25 ವರ್ಷದಿಂದ ಫೀಲ್ಡ್ ಅಸಿಸ್ಟೆಂಟಾಗಿ ಕೆಲಸ ಮಾಡಿಕೊಂಡು ಬಂದಿರುತ್ತಾರೆ. ಅವರಿಗೆ ಪುನಃ ಟ್ರೈನಿಂಗ್ ಕೊಡುವುದರಿಂದ ಅವರಿಗೆ ಹೆಚ್ಚಿಗೆ ಪಗಾರ ಕೊಡಬೇಕಾಗುತ್ತದೆ. ಆದ್ದರಿಂದ ಅವರಿಗೆ ಟ್ರೈನಿಂಗ್ ಕೊಡುವುದನ್ನು ತಪ್ಪಿಸಲಿಕ್ಕೆ ಅಸಾಧ್ಯ ಇದೆಯೋ?

**ಶ್ರೀ ಎಸ್. ಚಿಕ್ಕೆಗೌಡ**– ಸುಮಾರು 20–25 ವರ್ಷ ಸರ್ವಿಸ್ ಆಗಿರುವುದರಿಂದ ಅವರಿಗೆ ತರಬೇತಿ ಅವಶ್ಯವಾಗುವುದಿಲ್ಲ

**ಶ್ರೀ ಬಿ.ಎಂ. ಹೊರಕೇರಿ**– ಇದನ್ನು ಬೇರೆಯವರಿಗೂ ಮಾಡಲಿಕ್ಕೆ ಸಾಧ್ಯವೇ.

**ಶ್ರೀ ಎಸ್. ಚಿಕ್ಕೇಗೌಡ**– ಅವರು ಎಷ್ಟು ವರ್ಷ ಸರ್ವಿಸ್ ಮಾಡಿದ್ದಾರೆ ಎನ್ನುವುದರ ಮೇಲೆ ಹೋಗುತ್ತದೆ.

**ಶ್ರೀ ಬಿ.ಎಂ. ಹೊರಕೇರಿ**– ಸ್ವಾಮಿ, ವೇತನ ಆಯೋಗದವರ ಪ್ರಕಾರ ಫೀಲ್ಡ್ ಅಸಿಸ್ಟೆಂಟ್ ಅವರಿಗೆ ವೇತನ ಕೊಟ್ಟಿರತಕ್ಕದ್ದು ಸೇವಾ ನಿಯಮಾವಳಿಗಳಲ್ಲಿ ತಿದ್ದುಪಡಿಯಾಗಿದೆಯೋ?

**ಶ್ರೀ ಎಸ್. ಚಿಕ್ಕೇಗೌಡ**–ಇನ್ನು ಆಗಿಲ್ಲ, ಆಗಬೇಕಾಗಿದೆ.

**ಶ್ರೀ ಬಾಪುಗೌಡ**:– ಸ್ವಾಮಿ ತಮ್ಮ ಉತ್ತರದಲ್ಲಿ ಪಟ್ಟಿ ತಯಾರಾಗಿದೆ, ಅದನ್ನು ಗೆಜೆಟ್‌ನಲ್ಲಿ ಪಬ್ಲೀಷ್ ಮಾಡಿಲ್ಲ ಎಂದು ಹೇಳಿದ್ದೀರಿ ಆ ಪಟ್ಟಿ ಪಬ್ಲೀಷ್ ಮಾಡುವುದಕ್ಕೆ ತೊಂದರೆ ಏನು?

**ಶ್ರೀ ಎಸ್. ಚಿಕ್ಕೇಗೌಡ**– ಈಗ 1–11–1956 ರಲ್ಲಿ ಇಂಟರ್ ಸ್ಟೇಟ್ ಸೀನಿಯಾರಟಿ ಲೀಸ್ಟ್ ಪಬ್ಲಿಷ್ ಆಗಿದೆ. ನಂತರ 2–11–1956 ರಿಂದ 31.12.1956ರ ವರಗೆ ಎಡಿಡೇಷನ್ ಲಿಸ್ಟ್ ಪಬ್ಲಿಷ್ ಆಗಿದೆ. ಮತ್ತೆ 1.1.1962ರಿಂದ 30.4.1977ರ ವರಗೆ ಪಬ್ಲಿಷ್ ಮಾಡಲಿಕ್ಕೆ ಲಿಸ್ಟ್ ಮಾಡಿದೆ.

**ಶ್ರೀ ಬಿ. ಎಂ. ಹೊರಕೇರಿ**–ಸ್ವಾಮಿ, ಈಗಾಗಲೇ ಕೆಲವರಿಗೆ ಪ್ರಮೋಷನ್ ಸಿಕ್ಕುವ ಸಂದರ್ಭ ಇತ್ತು, ಇಷ್ಟೊತ್ತಿಗೆ ಲಿಸ್ಟ್ ಪ್ರಕಟಣೆಯಾಗಿದ್ದು ತಿಳಿದುಬಂದಿದ್ದರೆ, ತೊಂದರೆಯಾಗತಕ್ಕ ಸಂದರ್ಭದಲ್ಲಿ ಅಬ್ಜಕ್ಷನ್ ಮಾಡಲಿಕ್ಕೆ ಅನುಕೂಲವಾಗುತ್ತಾ ಇರಲಿಲ್ಲವೇ?

**ಶ್ರೀ ಎಸ್. ಚಿಕ್ಕೇಗೌಡ**– ಲಿಸ್ಟ್‌ನ್ನು ಅಧಿಕೃತವಾಗಿ ಸರ್ಕಾರಿ ಕಚೇರಿಗಳಲ್ಲಿ ಹಾಕಿದ ಮೇಲೆ ಎಲ್ಲರಿಗೂ ಅದನ್ನು ನೋಡತಕ್ಕ ಮತ್ತು ಅದರ ಬಗ್ಗೆ ಮಾಹಿತಿ ಪಡೆಯತಕ್ಕಂಥ ಹಕ್ಕಿದೆ. ಅದನ್ನು ಪಬ್ಲಿಷ್ ಮಾಡಿದ್ದೇವೆ.

**ಶ್ರೀ ಎಂ.ಬಿ. ರಾಮಸ್ವಾಮಿ**– ಸ್ವಾಮಿ, ಮೂರು ಲಿಸ್ಟ್ ಇದೆಂದು ಹೇಳಿದಿರಿ. ಆ ರೀತಿ ಮೂರು ಲಿಸ್ಟ್ ಇರುವುದರಿಂದ ಸೀನಿಯಾರಟಿ ಬಗ್ಗೆ ತಕರಾರು ಬಂದು ನಾಳೆ ದಿವಸ ಪ್ರಮೋಷನ್ ಕಾಲದಲ್ಲಿ ಅವರಿಗೆ

ಅನ್ಯಾಯವಾಗುವುದಿಲ್ಲವೇ? ಆದುದರಿಂದ 15-20 ವರ್ಷ ಸೇವೆ ಮಾಡಿರತಕ್ಕಂತವರಿಗೆ ಪ್ರಮೋಷನ್‌ನಲ್ಲಿ ಅನ್ಯಾಯವಾಗುವುದನ್ನು ಸರಿಪಡಿಸುವ ಬಗ್ಗೆ ಅಶ್ವಾಸನೆ ಕೊಡುತ್ತೀರಾ?

**ಶ್ರೀ ಎನ್. ಚಿಕ್ಕೇಗೌಡ**– 3-4 ಲಿಸ್ಟ್‌ನ್ನು ಅವರು ಯಾವ ಯಾವ ವರ್ಷದಲ್ಲಿ ಸೇರಿದ್ದಾರೆ, ಆದರೆ ಸೇವಾ ನಿಯಮ ಎಷ್ಟು ಎನ್ನುವುದನ್ನೆಲ್ಲಾ ತಿಳಿಯುವುದಕ್ಕೆ ಅನುಕೂಲವಾಗುವಂತಾಗಲು ಮಾಡಿದ್ದೇವೆ. ಈ ಫೀಲ್ಡ್ ಅಸಿಸ್ಟೆಂಟ್ಸ್ ಮತ್ತು ಅಗ್ರಿಕಲ್ಚರಲ್ ಅಸಿಸ್ಟೆಂಟ್ಸ್ ಏನಿದ್ದಾರೆ ಅವರ ಸಮಸ್ಯೆಗೆ ಸರ್ಕಾರದವರು ಏನು ನಿರ್ಣಯಗಳನ್ನು ತೆಗೆದುಕೊಳ್ಳುತ್ತಾರೆ ಹಾಗೂ ಕೆಲವರು ಕೋರ್ಟಿಗೆ ಹೋಗಿದ್ದಾರೆ.

**ಶ್ರೀ ಬಿ.ಎಂ. ಹೊರಕೇರಿ** [ಗುಳೇದಗುಡ್ಡ] ಸನ್ಮಾನ್ಯ ಸಭಾಧ್ಯಕ್ಷಿಣಿಯವರೇ ಲೋಕೋಪಯೋಗಿ ಶಾಖೆಯ ಸಚಿವರು ಮತ್ತು ಚಿಕ್ಕ ನೀರಾವರಿ ಶಾಖೆಯ ಸಚಿವರು ಈ ಸಭೆಯ ಮುಂದೆ ಮಂಡಿಸಿದಂತಹ ಬೇಡಿಕೆಗಳ ಮೇಲೆ ಅನೇಕ ಶಾಸಕ ಸ್ನೇಹಿತರನ್ನು ಈಗಾಗಲೇ ಅದನ್ನು ಸ್ವಾಗತಿಸಿ ಮಾತನಾಡಿದ್ದಾರೆ. ಈಗಾಗಲೇ ನಮ್ಮ ಸ್ನೇಹಿತರಾದಂತಹ ಶಂಕರಗೌಡರು ಹೇಳಿದಂತೆ ರಾಷ್ಟ್ರೀಯ ಹೆದ್ದಾರಿ ಮತ್ತು ರಾಜ್ಯದ ಜಿಲ್ಲಾ ರಸ್ತೆಗಳು ಇವುಗಳನ್ನೆಲ್ಲಾ ಉಳಿದು ಗ್ರಾಮಾಂತರ ರಸ್ತೆಗಳನ್ನು ತಾಲ್ಲೂಕು ಬೋರ್ಡ್‌ಗೆ ವಹಿಸಿದ್ದರಿಂದ ಅಲ್ಲಿ ಹಣ ಇಲ್ಲದೆ ರಸ್ತೆಗಳ ಪರಿಸ್ಥಿತಿ ತುಂಬಾ ಕೆಟ್ಟು ಹೋಗಿದೆ. ನಗರಗಳಿಗೆ ಸಂಚಾರಕ್ಕೆ ಯೋಗ್ಯವಾಗಿಲ್ಲ. ಇದರಿಂದಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ರೈತರು ಬೆಳೆದಂತಹ ಒಕ್ಕಲುತನದ ಹುಟ್ಟುವಳಿಯನ್ನು ಪೇಟೆಯ ಮಾರುಕಟ್ಟೆಗೆ ತೆಗೆದುಕೊಂಡು ಹೋಗಿ ಮಾರಾಟ ಮಾಡುವುದಕ್ಕೆ ಸಾಧ್ಯವಿಲ್ಲದೆ ಇರುವುದರಿಂದ ಅವರಿಗೆ ಅವರು ಬೆಳೆದಂತಹ ಮಾಲಿಗೆ ಸರಿಯಾದ ಧಾರಣೆ ಸಿಕ್ಕುತ್ತಾ ಇಲ್ಲ. ಆದ್ದರಿಂದ ಇಂಥಾ ಕಡೆ ಗ್ರಾಮಾಂತರ ರಸ್ತೆಗಳನ್ನು ತಾಲ್ಲೂಕು ಬೋರ್ಡಿನಿಂದ ಪಬ್ಲಿಕ್ ವರ್ಕ್ಸ್ ಡಿಪಾರ್ಟಮೆಂಟಿನ ವರ್ಗಾವಣೆ ಮಾಡಿ ಆ ರಸ್ತೆಗಳನ್ನು ದುರಸ್ತು ಮಾಡಿಸಿಕೊಡಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು ಐಹೊಳೆ, ಬಾದಾಮಿ, ಪಟ್ಟದಕಲ್ಲು ಈ ಪ್ರದೇಶಗಳು ಐತಿಹಾಸಿಕ ಸ್ಥಳಗಳಾಗಿವೆ. ಈ ಸ್ಥಳಗಳು ಒಂದೊಂದು ಸಮೀಪದಲ್ಲಿರುವುದರಿಂದ ಈ ಸ್ಥಳಗಳಿಗೆ ಹೋಗಬೇಕಾದರೆ ನದಿ ಹಳ್ಳಗಳ ಮೂಲಕ ದಾಟಿ ಹೋಗಬೇಕಾಗಿರುವುದರಿಂದ ರಸ್ತೆಗಳಲ್ಲಿ ಆತಂಕಗಳುಂಟಾಗದಂತೆ

ಹೋಗಬೇಕಾದರೆ ಬಳಸಿಕೊಂಡು ಹೋಗಬೇಕಾಗುತ್ತದೆ. ಈ ಸ್ಥಳಗಳನ್ನು ನೋಡುವುದಕ್ಕೆ ನಮ್ಮ ರಾಜ್ಯದ ಪ್ರವಾಸಿಗರಲ್ಲದೆ ಪರದೇಶದ ಪ್ರವಾಸಿಗರೂ ಬರುತ್ತಾರೆ. ಆದ್ದರಿಂದ ಅವರು ಈ ಸ್ಥಳಗಳಿಗೆ ಬರಬೇಕಾದರೆ ಸುತ್ತಿಕೊಂಡು ಬರುವುದಕ್ಕೆ ಅವರಿಗೆ ಬೇಸರವಾಗುತ್ತದೆ. ಆದ್ದರಿಂದ ಅವರಿಗೆ ರಸ್ತೆಗಳನ್ನು ಈ ಐತಿಹಾಸಿಕ ಸ್ಥಳಗಳು ಸಮೀಪವಾಗುವಂತೆ ಮಾಡಿ ಮಧ್ಯೆ ಬರತಕ್ಕ ಹಳ್ಳಗಳ ಸೇತುವೆಗಳನ್ನು ಕಟ್ಟಿ ಅವರಿಗೆ ಅನುಕೂಲ ಮಾಡಿಕೊಡುವಂಥದ್ದು ಯೋಗ್ಯ ಎಂದು ನಾನು ನಿಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಇಂತಹದ್ದೊಂದು ಸೇತುವೆಯನ್ನು ಚಿಮ್ಮಲಗಿ ಹತ್ತಿರ ಹಳ್ಳಕ್ಕೆ ಕಟ್ಟಿಸಬೇಕಾಗಿ ವಿನಂತಿ.

ಇನ್ನು ಚಿಕ್ಕ ನೀರಾವರಿ ವಿಷಯದಲ್ಲಿ ಹೇಳುವುದೇನೆಂದರೆ ನಮ್ಮ ರಾಜ್ಯದಲ್ಲಿ ಸಣ್ಣ ನೀರಾವರಿ ಯೋಜನೆಗಳು ಆಗುತ್ತಿವೆ. ಈಗಾಗಲೇ ಮಾನ್ಯ ಸದಸ್ಯರನೇಕರು ಹೇಳಿದಂತೆ ಚಿಕ್ಕ ನೀರಾವರಿಗೆ ಮಾತ್ರ ನಮ್ಮ ರಾಜ್ಯದಲ್ಲಿ ಬಹಳ ಮಹತ್ವ ಇದೆ ಎಂದು ಹೇಳಬಹುದು. ಬೃಹತ್ ನೀರಾವರಿ ಯೋಜನೆಗಳು ಕಾರ್ಯಗತವಾಗಬೇಕಾದರೆ ಒಂದು ದಶಕ ಬೇಕಾಗುತ್ತದೆ. ಚಿಕ್ಕ ನೀರಾವರಿ ಕೆಲಸಗಳಿಗೆ ಹೆಚ್ಚಿನ ಮಹತ್ವ ಇರುವುದರಿಂದ ಈ ಕೆಲಸವನ್ನು ಆದಷ್ಟು ತೀವ್ರಗತಿಯಿಂದ ಮಾಡುವ ಸಲುವಾಗಿ ಸರ್ಕಾರದವರು ಇದಕ್ಕೆ ಹೆಚ್ಚು ಗಮನ ಕೊಡಬೇಕಾಗುತ್ತದೆ. ನಮ್ಮ ಬಿಜಾಪುರ ಜಿಲ್ಲೆ ಬರಗಾಲ ಪ್ರದೇಶ ಸರ್ವಜ್ಞನು ಹೇಳುವಂತೆ:

*ಊರು ಸನಿಹದಲ್ಲಿಲ್ಲ ನೀರೊಂದು ಗಾವುದವು*
*ಸೇರಿ ನಿಲ್ಲುವರೆ ನೆರಳುಂಟೆ ಬಡಗಲದ*
*ದಾರಿ ಬೇಡೆಂದ ಸರ್ವಜ್ಞ*

ಹೀಗೆಂದು ಉತ್ತರ ಕರ್ನಾಟಕ ದೇಶವನ್ನು ಬರಗಾಲ ಪ್ರದೇಶವೆಂದು ಸಾರಿದ್ದಾನೆ.

ಆದ್ದರಿಂದ ಈ ಪ್ರದೇಶದಲ್ಲಿ ಚಿಕ್ಕ ನೀರಾವರಿ ಯೋಜನೆಗಳಿಗೆ ಹೆಚ್ಚಿನ ಆದ್ಯತೆಯನ್ನು ಕೊಡಬೇಕಾಗುತ್ತದೆ ಎಂದು ನಾನು ಹೇಳುತ್ತೇನೆ.

ಲೋಕೋಪಯೋಗಿ ಇಲಾಖೆಯವರು ನಮ್ಮ ಬಿಜಾಪುರ ಜಿಲ್ಲೆಯಲ್ಲಿ ಅನೇಕ ಕಡೆ ನದಿಗಳಿಗೆ ಮತ್ತು ಹೊಳೆಗಳಿಗೆ ಅಡ್ಡಲಾಗಿ ಕಟ್ಟಿದ ಸೇತುವೆಗಳನ್ನು ಬ್ಯಾರೇಜ್‌ಗಳನ್ನಾಗಿ ಪರಿವರ್ತಿಸಿದ್ದಾರೆ. ಹೆದ್ದಾರಿಗಳು, ಜಿಲ್ಲಾ

ರಸ್ತೆಗಳು, ಸ್ಟೇಟ್ ಹೈವೆಗಳಲ್ಲಿ ಕೆಲವು ಸೇತುವೆಗಳನ್ನು ಕಟ್ಟಿಸಿ ಕೊಡುವಂತಾದ್ದು ಅವಶ್ಯ ಇದೆ. ಹೀಗೆ ಬ್ಯಾರೇಜ್‌ಗಳನ್ನು ಕಟ್ಟಿದ ಸ್ಥಳಗಳಲ್ಲಿ ಬೇಸಿಗೆಯಲ್ಲಿ 12 ತಿಂಗಳು ಎಲ್ಲಿ ನೀರು ಸಿಗುತ್ತದೆ. ಅಂತಹ ಕಡೆಗಳಲ್ಲಿ ಮೇಲ್ದಂಡೆಯಲ್ಲಿ ನೀರಾವರಿ ಲಿಫ್ಟ್ ಇರಿಗೇಷನ್ ಕೆಲಸ ಮಾಡುವ ಸಲುವಾಗಿ ಅನುಕೂಲ ಮಾಡಿಕೊಟ್ಟಂತಿದೆ. ಖಾಸಗಿಯಾಗಿ ರೈತರು ಲೀಫ್ಟ್ ಎರಿಗೇಷನ್ ಮಾಡಿಕೊಳ್ಳಲಿಕ್ಕೆ ಮುಂದೆ ಬರಲಾರರು. ಏಕೆಂದರೆ ಅದಕ್ಕೆ ಬಡತನ, ಅಜ್ಞಾನ ಕಾರಣವಿದೆ. ಆದುದರಿಂದ ಸರ್ಕಾರದವರು ಸರ್ಕಾರಿ ಲೀಫ್ಟ್ ಇರಿಗೇಷನ್ ಮಾಡಬೇಕು. ಇದನ್ನು ಕಾರ್ಯಗತ ಮಾಡಲಿಕ್ಕೆ ಬೇರೆ ಕೆಲಸಗಳನ್ನು ನಿರ್ವಹಿಸಲಿಕ್ಕೆ ರಾಜ್ಯ ಮಟ್ಟದಲ್ಲಿ ಅನೇಕ ಮಂಡಳಿಗಳನ್ನು ಮಾಡುವ ಹಾಗೆ ನಮ್ಮ ರಾಜ್ಯದಲ್ಲಿ ಲಿಫ್ಟ್ ಇರಿಗೇಷನ್ ಮಂಡಳಿಗಳನ್ನು ಮಾಡಿ ಅದರ ಮುಖಾಂತರ ಕಾರ್ಯಗತ ಮಾಡಿ ಲೀಫ್ಟ್ ಇರಿಗೇಷನ್ ಕೆಲಸ ತೀವ್ರವಾಗಿ ಆಗುತ್ತದೆ ಎನ್ನುವ ಭರವಸೆ ಇದೆ. ಇನ್ನು ಈ ನೀರಾವರಿ ಬಗ್ಗೆ ಹೇಳುವುದಾದರೆ ತಾಲ್ಲೂಕ ಮಟ್ಟದಲ್ಲಿ ತಹಸೀಲ್ದಾರರು, ಬಿ.ಡಿ.ಓ. ಅಸಿಸ್ಟಂಟ್ ಇಂಜಿನಿಯರ್ ಇರುತ್ತಾರೆ. ಅವರು ಆಗಾಗ ಸಭೆ ಕರೆದು ನೀರಾವರಿ ಬಗ್ಗೆ ಬೇಕು ಬೇಡಿಕೆಗಳನ್ನು ವಿಚಾರ ಮಾಡಿದರೆ ಇದು ಕಾರ್ಯಗತ ಆಗುತ್ತದೆ. ಈಗ ಸರಿಯಾಗಿ ಆಗುತ್ತಿಲ್ಲ ಎಂದು ಕಂಡುಬಂದಿದೆ. ಆದುದರಿಂದ ಇದನ್ನು ಸರಿಯಾಗಿ ಮಾಡಬೇಕು ಎಂದು ನಾನು ತಮ್ಮಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ.

ನೀರಾವರಿ ಬಗ್ಗೆ ಮತ್ತೊಂದು ವಿಚಾರವನ್ನು ಹೇಳುವುದಾದರೆ, ನಮ್ಮ ಪಿ.ಡಬ್ಲ್ಯೂಡಿ ಅಧಿಕಾರಿಗಳು 3 ಕಾಲಗಳಲ್ಲಿ ಹಂಗಾಮಿಗಳಾಗಿ ಮಾಡುತ್ತಾರೆ. ಜೂನ್ 16 ರಿಂದ್ ಅಕ್ಟೋಬರ್ 15ರ ವರೆಗೆ, ಅಕ್ಟೋಬರ್ 16 ರಿಂದ ಫೆಬ್ರವರಿ 15ರ ವರೆಗೆ, ಫೆಬ್ರವರಿ 16ರಿಂದ ಜೂನ್ 15ರ ವರೆಗೆ ಮಳೆಗಾಲ, ಚಳಿಗಾಲ ಮತ್ತು ಬೇಸಿಗೆ ಕಾಲ ಎಂದು ಮಾಡುತ್ತಿದ್ದಾರೆ. ಒಂದೊಂದು ಕಡೆಗೆ ಒಂದೊಂದು ಸೀಸನ್ ಹಂಗಾಮಿಗಳಾಗಿರುತ್ತವೆ. ರೈತರು ತಮ್ಮ ಫಸ್ಟ್ ಸೆಕೆಂಡ ಕ್ರಾಪನ್ನು ತೆಗೆದುಕೊಳ್ಳುವಾಗ ಒಂದು ಕ್ರಾಪ್ 2 ಸೀಸನ್‌ಗಳ ಮಧ್ಯದಲ್ಲಿ ಬರುತ್ತದೆ. ಮಳೆಗಾಲ ಜೂನ್ 16 ರಿಂದ ಅಕ್ಟೋಬರ 15 ರವರೆಗೆ ಎಂದು ಹೇಳುತ್ತಾರೆ. ಅಕ್ಟೋಬರ್ 16ರಿಂದ ಫೆಬ್ರವರಿ 15ರ ವರೆಗೆ ಬೆಳೆ ತೆಗೆಯಬೇಕಾಗುತ್ತದೆ. ನವೆಂಬರ್‌ನಲ್ಲಿ ಬಿತ್ತನೆ ಮಾಡುವುದರಿಂದ ಮುಂದಿನ ಬೇಸಿಗೆಯಲ್ಲಿ ಮುಂದುವರಿಸುತ್ತಾರೆ. ಬೇಸಿಗೆಯೊಳಗೆ ಹಂಗಾಮಿಯಲ್ಲಿ ನೀರು ಕೊಡಬೇಕಾಗುತ್ತದೆ. ಚಳಿಗಾಲದಲ್ಲೂ ನೀರು ಕೊಡಬೇಕಾಗುತ್ತದೆ.

ಎರಡು ಹಂಗಾಮಿನಲ್ಲಿ ನೀರು ಕೊಟ್ಟರೂ ಒಂದೇ ಬೆಳೆಯಾಗುವುದರಿಂದ ಒಂದು ಬೆಳೆ ಮಾತ್ರ ಲೆಕ್ಕ ಹಾಕಬೇಕು. ಅಥವಾ ಬೆಳೆಗೆ ಕೊಟ್ಟ ನೀರಿನ ಸಂಖ್ಯೆಗಳಿಗೆ ನೀರಿನ ತೆರಿಗೆ ಹಾಕಬೇಕು. ಇದರಂತೆ ಒಂದು ಬೆಳೆಗೆ ತಕ್ಕಂತೆ ತೆರಿಗೆಯನ್ನು ಬಾಕಿ ವಸೂಲಿ ರೈತರಿಗೆ ಅನುಕೂಲವಾಗುತ್ತದೆ ಎಂದು ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಈ ನೀರಾವರಿ ಬಗ್ಗೆ ಮತ್ತೊಂದು ಮುಖ್ಯವಾದ ವಿಚಾರವೆಂದರೆ ನಮ್ಮ ಮಲಪ್ರಭಾ ನದಿ ದಂಡೆ ಮೇಲೆ ಲಿಫ್ಟ್ ಇರಿಗೇಷನ್ಗಳಾಗಿವೆ. ಇದು ಬಹಳ ಮಹತ್ವದ್ದು. ಬಾದಾಮಿ, ಹುನಗುಂದ ತಾಲ್ಲೂಕಿನಲ್ಲಿ ಹೆಬ್ಬಾಳ, ರಾಂಪಾಳ, ಸಿದ್ಧನಕೊಳ್ಳ, ಬಾಚಿನಗುಡ್ಡ, ಚೊಳಚಗುಡ್ಡ ಮುಂತಾದ ಕಡೆಗಳಲ್ಲಿ ಲಿಫ್ಟ್ ಇರಿಗೇಷನ್ ಆಗಿದೆ. ಯಂತ್ರಗಳನ್ನು ಕೂಡಿಸಿದ್ದು ಆಗಿದೆ. ಆದರೆ ತಾಂತ್ರಿಕ ತೊಂದರೆ ಇದೆ. ಎಲೆಕ್ಟ್ರಿಸಿಟಿ ಪವರ್ನ್ನು ಕನೆಕ್ಷನ್ ಕೊಡಬೇಕಾದರೆ ಎರಡು ಮೂಲಗಳು ಇರುತ್ತವೆ. ಒಂದನೆಯದು ಎಲೆಕ್ಟ್ರಿಸಿಟಿ ಬೋರ್ಡ್, ಇನ್ನೊಂದು ಸರ್ಕಾರ ಕಂಟ್ರೋಲ್ ಮಾಡುವುದು. ಇವೆರಡರಲ್ಲಿ ಹೊಂದಾಣಿಕೆ ಇಲ್ಲದಿರುವುದರಿಂದ ಪವರ್ ಕನೆಕ್ಷನ್ ಇಲ್ಲದೆ ಬಹಳ ತೊಂದರೆಯಾಗಿದೆ. ಆದುದರಿಂದ ಸರ್ಕಾರ ಇದರ ಕಡೆ ಲಕ್ಷ್ಯ ಕೊಟ್ಟು ತೀವ್ರಗತಿಯಿಂದ ಮಾಡಿದರೆ ಅನುಕೂಲವಾಗುತ್ತದೆ. ಈ ನೀರಾವರಿ ಕೆಲಸ ಮಾಡತಕ್ಕಂಥ ಪಿ.ಡಬ್ಲ್ಯು.ಡಿ. ಸ್ಟಾಫ್ ಮೈನರ್ ಇರಿಗೇಷನ್ನಾಗಲಿ, ಮೇಜರ್ ಇರಿಗೇಷನ್ಲ್ಲಾಗಲಿ ಕೆಲಸ ಮಾಡತಕ್ಕವರಿಗೆ ಇನ್ಸೆಂಟಿವ್ ಬರುವ ಹಾಗೆ ಹೆಚ್ಚಿನ ಪಗಾರ ಕೊಟ್ಟರೆ ಅನುಕೂಲವಾಗುತ್ತದೆ. ಇದರ ಬಗ್ಗೆ ಸರ್ಕಾರ ವಿಚಾರ ಮಾಡಬೇಕು. ಏಕೆಂದರೆ ಅವರಿಗೆ ಹೆಚ್ಚಿನ ಅನುಕೂಲವಾದರೆ ಅವರು ದಕ್ಷತೆಯಿಂದ, ಕಾರ್ಯ ಕ್ಷಮತೆಯಿಂದ ಕೆಲಸ ಮಾಡುತ್ತಾರೆ. ಆದುದರಿಂದ ಸರ್ಕಾರ ಇದರ ಬಗ್ಗೆ ಪರಿಶೀಲನೆ ಮಾಡಿ ಇನ್ವೆಸ್ಟಿಗೇಷನ್ ಕೆಲಸದಲ್ಲಾಗಲಿ, ಪ್ಲಾನ್ ಮತ್ತು ಎಸ್ಟಿಮೇಟ್ ತಯಾರು ಮಾಡುವವರು ಇನ್ಸೆಂಟಿವ್ ಕೊಟ್ಟರೆ ದಕ್ಷತೆಯಿಂದ ಕೆಲಸಗಳಾಗುತ್ತವೆ. ನಮ್ಮ ರಾಜ್ಯದ ನಾನ್ ಗೆಜೆಟೆಡ್ ಪಿ.ಡಬ್ಲ್ಯು.ಡಿ ಅಧಿಕಾರಿಗಳಲ್ಲಿ ಅಂದರೆ ಬಾಂಬೆ ಕರ್ನಾಟಕದಿಂದ ಬಂದವರು, ಹೈದ್ರಾಬಾದ ಕರ್ನಾಟಕದಿಂದ ಬಂದವರು ಮತ್ತು ಮದ್ರಾಸ್ ಸರ್ಕಾರದಿಂದ ಬಂದವರು ಹಾಗೂ ಹಳೆ ಮೈಸೂರಿನಲ್ಲಿರುವವರಿಗೆ ಪಗಾರದಗಳ ಶ್ರೇಣಿಯಲ್ಲಿ ವ್ಯತ್ಯಾಸವಿದೆ. ಈ ವಿಮರ್ಶೆಯನ್ನು ಹೋಗಲಾಡಿಸಿ ಸಮಾನತೆ ಮಾಡಿಕೊಟ್ಟರೆ ಅವರು ಹುರುಪಿನಿಂದ ಕೆಲಸ ಮಾಡುತ್ತಾರೆ. ಆದುದರಿಂದ ಸರ್ಕಾರ ಇವರಿಗೆ

ಪಗಾರ ಭಡತಿ, ಭತ್ಯೆ ಸಮಾನತ್ವ ಬರುವಂತೆ ಮಾಡಿಕೊಡಬೇಕು ಎಂದು ತಮ್ಮಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ.

ಮತ್ತೊಂದು ವಿಚಾರವೇನೆಂದರೆ ಖಾನಾಪುರ ತಾಲ್ಲೂಕಿನಲ್ಲಿ ಮಲಪ್ರಭಾ ನದಿ ಪ್ರಧಾನವಾಗಿ ಸಂಗಮದವರೆಗೆ ಹರಿಯುತ್ತದೆ. ಆ ನದಿಗೆ ನವಿಲು ತೀರ್ಥ ಎಂದು ಆಣೆಕಟ್ಟು ಆಗಿ ಮಲಪ್ರಭಾ ಎಡದಂಡೆ ಮತ್ತು ಬಲದಂಡೆ ಕೆಲಸಗಳನ್ನು ಮಾಡುತ್ತಿದ್ದಾರೆ. ಖಾನಾಪುರ ತಾಲ್ಲುಕಿನಲ್ಲಿ ವರ್ಷಕ್ಕೆ 210 ಇಂಚು ಮಳೇ ಬೀಳುತ್ತದೆ. ಕಳೆದ ವರ್ಷ ಹೇಳಿದಂತೆ ಈ ಪ್ರದೇಶದಿಂದ ಮಾದಾಯಿ ನದಿ ಗೋವಾದ ಕಡೆಗೆ ಹರಿಯುತ್ತದೆ. ಆ ನೀರನ್ನು ಮಲಪ್ರಬಾ ನದಿಗೆ ಕೂಡಿಸಿ ಕೊಟ್ಟರೆ ಅಪಾರ ನೀರಿನ ಸೌಲಭ್ಯ ಸಿಗುತ್ತದೆ. ಕೇಂದ್ರ ಸರ್ಕಾರದವರು ಗಂಗಾನದಿಯನ್ನು ಕಾವೇರಿ ನದಿಗೆ ಕೂಡಿಸುತ್ತೇವೆ ಎಂದು ಹೇಳುತ್ತಾ ಇದ್ದಾರೆ ಅದು ಯಾವಾಗ ಆಗುತ್ತದೆಯೋ ಗೊತ್ತಿಲ್ಲ. ಮಾದಾಯಿ ರೀವರ್‌ನ್ನು ಮಲಪ್ರಭಾ ನದಿಗೆ ಕೂಡಿಸಿದರೆ 12 ಟಿ.ಎಂ.ಸಿ.ಎಫ್.ಟಿ. ನೀರು ದೊರಕುತ್ತದೆ. ಇದನ್ನು ಕಾರ್ಯಗತ ಮಾಡಿದರೆ ತಾಂತ್ರಿಕ ತಜ್ಞರು ಒಂದು ಲಕ್ಷ ಇಪ್ಪತ್ತು ಸಾವಿರ ಎಕರೆ ನೀರಾವರಿ ಅನುಕೂಲವಾಗುತ್ತದೆಂದು ಹೇಳುತ್ತಾ ಇದ್ದಾರೆ. ಮಲಪ್ರಭಾ ಎಡದಂಡೆ ಮತ್ತ ಬಲದಂಡೆ ಗಳಲ್ಲಿ ಲಿಫ್ಟ್ ಇರಿಗೇಷನ್ ಮಾಡುವುದನ್ನು ಹೆಚ್ಚಿಸಿದರೆ ಆಣೆಕಟ್ಟನಿಂದ ಕೆಳಗಡೆ ಇರುವಂತಹ ಪ್ರದೇಶವನ್ನು ತೆಗೆದುಕೊಳ್ಳಲಿಕ್ಕೆ ಸಾಧ್ಯವಾಗುತ್ತದೆ. ಆದುದರಿಂದ ಸರ್ಕಾರ ಈ ಕಡೆ ಲಕ್ಷ್ಯ ಕೊಟ್ಟು ಕೆಲಸ ಮಾಡುವುದರಿಂದ ಒಂದು ಲಕ್ಷ ಇಪ್ಪತ್ತು ಸಾವಿರ ಎಕರೆಗೆ ನೀರಾವರಿ ಯಾಗುತ್ತದೆ. ಬಾದಾಮಿ ತಾಲ್ಲೂಕದಲ್ಲಿ ಹಾಲಗೇರಿ ಮತ್ತು ಹಲಕುರಕಿ ಕಡೆಗಳಲ್ಲಿ ಲೀಫ್ಟ ಇರಿಗೇಷನ್ ಮೂಲಕ ಕಾಲುವೆ ಮಾಡಿದರೆ ಹೆಚ್ಚಿಗೆ ನೀರಾವರಿಯಾಗುತ್ತದೆ. ಮಲಪ್ರಭಾ ಎಡದಂಡೆ ಮತ್ತು ಬಲದಂಡೆ ಪ್ರದೇಶಗಳಲ್ಲಿ ನೆಲ ಫಲವತ್ತಾಗಿದೆ. ಬಾದಾಮಿ ತಾಲ್ಲೂಕಿನಲ್ಲಿ ನೀರಾವರಿ ಇಲ್ಲ. ಸರ್ಕಾರ ಮಲತಾಯಿ ಧೋರಣೆಯನ್ನು ತಾಳದೆ ನೀರಾವರಿ ಮಾಡಿಕೊಟ್ಟರೆ ಹೆಚ್ಚು ಫಲವತ್ತಾದ ಭೂಮಿಗೆ ನೀರು ಸಿಗುತ್ತದೆ. ಇದರಿಂದ ನಮ್ಮಲ್ಲಿ ಇನ್ನೂ ಹೆಚ್ಚಿನ ಆಹಾರ ಧಾನ್ಯಗಳನ್ನು ಬೆಳೆಸಬಹುದು. ಕ್ಷಾಮ, ಬರಗಾಲಗಳಲ್ಲಿ ನೀರನ್ನು ನಮ್ಮ ತಾಲ್ಲೂಕಿನ ನೀರಾವರಿಯಿಂದ ಹೆಚ್ಚಿಗೆ ಆಹಾರ ಧಾನ್ಯಗಳನ್ನು ಬೆಳೆದು ದೇಶಕ್ಕೆ ಪೂರೈಸಿಕೊಡುತ್ತೇವೆ ಎಂದು ಭರವಸೆ ನೀಡುತ್ತೇನೆ. ಇಷ್ಟು ಹೇಳಿ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

* * * * *

# ಬರಗಾಲದ ಮೇಲಿನ ಚರ್ಚೆಯಲ್ಲಿ ಮಾಡಿದ ಭಾಷಣ

13.11.1976

**ಶ್ರೀ ಬಿ.ಎಂ. ಹೊರಕೇರಿ** (ಗುಳೇದಗುಡ್ಡ)- ಮಾನ್ಯ ಸಭಾಪತಿಗಳೇ, ಮಾನ್ಯ ರಾಜ್ಯ ಸರ್ಕಾರದವರು ಅಭಾವ ಪರಿಸ್ಥಿರಿಯನ್ನು ಕುರಿತು ಕೇಂದ್ರ ಸರ್ಕಾರಕ್ಕೆ ಸಾದರ ಪಡಿಸಿದ ಎರಡೂ ಮೆಮೊರ್‍ಯಾಂಡಂನಲ್ಲಿ ವಿಜಾಪುರ ಜಿಲ್ಲೆಯ ದಕ್ಷಿಣ ಭಾಗದ ತಾಲ್ಲೂಕುಗಳ ಅಭಾವ ಪರಿಸ್ಥಿತಿ ಯಾವುದೇ ವರ್ಗದಲ್ಲಿ ಫುಲ್, ಪಾರ್ಷಿಯಲ್, ಡ್ರೈಬೆಲ್ಟ್ ವರ್ಗದಲ್ಲಿ ಕಾಣದೆ ಇರುವುದು ಆಶ್ಚರ್ಯಕರವಾದುದಲ್ಲದೆ ವಿಷಾದಕರವೆಂದು ಹೇಳಬಹುದು. ಈ ಭಾಗಕ್ಕೆ ಹೊಂದಿಕೆಯಾಗಿದ್ದ ರಾಯಚೂರು, ಧಾರವಾಡ, ಬೆಳಗಾಂ ಜಿಲ್ಲೆಯ ತಾಲ್ಲೂಕುಗಳು, ಲಿಂಗಸೂಗೂರು, ಕುಷ್ಟಗಿ, ರಾಮದುರ್ಗಗಳಲ್ಲಿ ಅಭಾವವಿದ್ದು. ಅಭಾವ ಪ್ರದೇಶಗಳನ್ನು ಆವರಿಸಲ್ಪಟ್ಟ ಮಧ್ಯದಲ್ಲಿ ಬರುವ ಬೀಳಗಿ, ಮುಧೋಳ, ಬಾಗಲಕೋಟೆ, ಬಾದಾಮಿ, ಹುನಗುಂದ ತಾಲ್ಲೂಕುಗಳಲ್ಲಿ ಅಭಾವವಿಲ್ಲದಿರುವುದು ಸೋಜಿಗವಾದ ಸಂಗತಿ. ಪ್ರಕೃತಿಯ ಸ್ವರೂಪ ಒಂದೇ ಇದ್ದು ಈ ಪ್ರದೇಶದಲ್ಲಿ ಹೀಗೆ ಭಿನ್ನಾಭಿಪ್ರಾಯವಿರುವುದಕ್ಕೆ ಕಾರಣವೇನೋ ತಿಳಿಯದು. ಆಗಾಗ್ಗೆ ಬರಗಾಲಗಳಿಂದ ಪೀಡಿತರಾಗಿ ಅನುಭವ ಪಡೆದು ಗಟ್ಟಿಗರಾದ(ಸೀಸನರ್) ನಮಗೆ ಈ ಸಲ ಅಭಾವದ ಬೇಸಿಗೆ ಬಂದಿದ್ದರೂ ಬಂದಿಲ್ಲವೆಂದೂ ವರದಿಯ ದಕ್ಷಿಣ ಭಾಗದ ತಾಲ್ಲೂಕಿನವರಿಗೆ ಕಳವಳವನ್ನುಂಟುಮಾಡಿದೆಂಯೆನ್ನಬೇಕೋ ಅಥವಾ ನಾವು ಉದಾರಿಗಳೆನ್ನಬೇಕೋ ತಿಳಿಯದಾಗಿದೆ. ಅಭಾವ ಪೀಡಿತ ಪ್ರದೇಶಗಳೆಂದು ಸಾರುವ ಜಿಲ್ಲೆಯ ಕಂದಾಯ ಅಧಿಕಾರಿಗಳೂ ಕೊಟ್ಟ ವರದಿ ಶಾಸಕರ ವರದಿಂಯ ಸಾರ್ವಜನಿಕ ಅರ್ಜಿ ಇವ್ರುಗಳ ಮೇಲಿನಿಂದ ತೀರ್ಮಾನವಾಗುತ್ತದೆಯೇನೋ ನಿಜ. ಇದಕ್ಕೆಲ್ಲಾ ಆಧಾರ ಭೂತವಾದ ಮಳೆಯ ಪರಿಮಾಣವು ಅಗತ್ಯ ಈ ತಾಲ್ಲೂಕಿನಲ್ಲಿ ಮಳೆಯ ಪರಿಣಾಮವೆಷ್ಟು, ಬೆಳೆ ಬರಬೇಕಾದ ಮಳೆಯ ಅಗತ್ಯವೆಷ್ಟು? ಸಕಾಲಿಕವಾಗಿದೆಯೋ ಇಲ್ಲವೋ ಎಂಬುದರ ವಿಚಾರಣೆಯನ್ನು ಪ್ರತ್ಯಕ್ಷ ಅರಿಯುಬೇಕು. ಸಂಥಿಂಗ್ ಇಸ್ ಬೆಟರ್ ದ್ಯಾನ್ ನಥಿಂಗ್ ಎಂಬಂತೆ ಅಲ್ಪ ಮಳೆಯು ಬರಲಿದ್ದ ನಮಗೆ ಬಡಪೈರು ಕೆಲ ಕೆಲವು ಭಾಗ ಪ್ರದೇಶದಲ್ಲಿ ಬಂದಿದೆ. ಹೀಗಾಗಲು ನಿಸರ್ಗವೂ ಕಾರಣವೇ. ಅದಕ್ಕಾಗಿ ತಾ-೧೦.೧೧.೧೯೭೬ರಂದು ಸದನದಲ್ಲಿ ಪ್ರಶ್ನೆ ಪ್ರತಿ೧೦-೨೦ಮೈಲಿಗೆ ಒಂದರಂತೆ ವೇದ ಶಾಲೆಯ ಘಟಕಗಳನ್ನು ಸ್ಥಾಪಿಸಿ ಆಯಾ ಪ್ರದೇಶದ ಮಳೆಗಾಲ ಋತುಮಾನಗಳ ಪರಿಸ್ಥಿತಿ ಅರಿಯಬೇಕೆಂಬುದಾಗಿ

ನನ್ನ ಆಶೆ. ಏಕೆಂದರೆ ೮.೮೧೯೭೬ರಂದು ಸಂಜೆ ಬಾದಾಮಿಯಲ್ಲಿ ದೊಡ್ಡ ಮಳೆ ಅಂದಾಜು ೫ ಇಂಚು ಆಯಿತು. ಈ ಮಳೆಯು ಇಂಟರ್‌ಸಿಟಿಯು ಮೇಲಿಂದ ತಾಲ್ಲೂಕಿನ ತುಂಬೆಲ್ಲಾ ಸಮೃದ್ಧಿ ಮಳೆಯಾಯಿತೆಂದು ಅನಿಸಿ ಸಂತೋಷಭರಿತರಾದೆವು. ಮುಂಜಾನೆ ಬೇರೊಂದು ಕಡೆಗೆ ಪ್ರವಾಸಕ್ಕೆ ಹೋದಾಗ ಈ ಮಳೆ ಕಾಣಲಿಲ್ಲ. ಹೀಗೆ ತಾಲ್ಲೂಕಿನ ಸ್ಥಳದಲ್ಲಿಯ ಮಳೆಯು ಮಾಪಕ ಯಂತ್ರದಿಂದಲೂ ಇಡೀ ತಾಲ್ಲೂಕಿನ ಭವಿಷ್ಯವೂ ಒಮ್ಮೊಮ್ಮೆ ನಿರ್ಧರಿಸಲ್ಪಡುವ ಸಂಭವವೂ ಇದೆ. ಈ ಪರಿಸ್ಥಿತಿ ನಮಗೆ ಈವರ್ಷ ಆಗಿದೆಯೋ ಎಂಬ ಸಂಶಯ. ಈ ಮಳೆಯ ಪ್ರಭಾವದಿಂದಾಗಿ ಬಾದಾಮಿ ಸುತ್ತಲಿನ ೧೦-೧೨ ಚದುರ ಮೈಲ ಪ್ರದೇಶದ ಶೇಂಗಾ, ಜೋಳ, ಸಜ್ಜೆ ಬೆಳೆ ಸಾಧಾರಣ ಕೈಗೆ ಬಂದವು. ಆದರೆ ಧೀರ್ಘಾವಧಿ ಬೆಳೆಯಾದ ಹಬ್ಬು ಶೇಂಗಾ ಇನ್ನೆರಡು ಮಳೆಗಳ ಅಭಾವದಿಂದ ಸರಿಯಾಗಿ ಲೆಕ್ಕಚಾರವಾಗಿ ಬರಲಿಲ್ಲ. ರೈತರ ಭರವಸೆ ಮಳೆಗಳಾದ ಹಸ್ತ ಉತ್ತರಿ ಮಳೆಗಳು ಆಗಲಿಲ್ಲ. ಆದರೆ ಹಸ್ತ ಇಲ್ಲದಿದ್ದರೆ ಒಕ್ಕಲಿಗ ಹಲುಕಿಸ್ತ. ಉತ್ತರಿ ಪಾಡಂತೂ ಮುಗಿದಿದೆ. ಹಿಂಗಾರಿ ಬಿತ್ತನೆಯಾಗಿದೆ. ವಿಶೇಷತ ಕಪ್ಪು ಭೂಮಿಗಳಿದ್ದು ಹುನಗುಂದ, ಬೀಳಗಿ ತಾಲ್ಲೂಕುಗಳಲ್ಲಿ ಆಗಲೇ ೫೦ ಪರ್ಸೆಂಟಿನಸ್ಟು ಕಪ್ಪು ಭೂಮಿದ್ದು ಬಾದಾಮಿ, ಬಾಗಲಕೋಟೆ ಮುಧೋಳ ತಾಲ್ಲೂಕಿನಲ್ಲಿ ಹತ್ತಿ, ಬಿಳಿ ಜೋಳ, ಗೋಧಿ ಬಿತ್ತನೆಯಾಗಿದ್ದಲ್ಲಿ, ಬಿರುಸು ಭೂಮಿ ಉನ್ನತ ಭೂಮಿ ಉತ್ಪನ್ನ ಭೂಮಿ ಕರಲ ಮಣ್ಣಿನಲ್ಲಿ ತೇವಾಂಶ ಇಲ್ಲದ್ದಕ್ಕೆ ನಿಂತಿವೆ. ಬಿಳಿಜೋಳ ಗೋಧಿ ನಾಟೆಯ ಜನನ ಪ್ರಮಾಣ ಸರಿಯಾಗಿ ಆಗಿಲ್ಲ. ತಗ್ಗು ಪ್ರದೇಶ ತಗ್ಗು ಪ್ರದೇಶ ಸಮಪಾಳಿ ಕ್ಷೇತ್ರ ಮತ್ತನೆ ಭೂಮಿ ಬಿತ್ತನೆ ಸರಿಯಾಗಿದ್ದಾಗ್ಯೂ ಅಲ್ಪ ಮಳೆಯಿಂದ ಕೆಲವೆಡೆ ಕೆಳಗೆ ಹಸಿ ನಿಸರ್ಗದತ್ತವಾದ ತಾಯಿ ಹಸಿ ಇದೆ. ಇವೆರಡರ ಮಧ್ಯೆ ಹಸಿಯಿಲ್ಲದ ಒಣ ತರವಿದ್ದು ಹಿಂಗಾರು ಬೆಳೆಗಳು ಬರುವ ಸಂಭವವಿಲ್ಲ. ಕಾರಣ ಸದ್ಯದಲ್ಲಿ ಇಲ್ಲಿ ಅತ್ಯಗತ್ಯ ಕೆಡಕಿನ ಮಳೆಗಳಿಂದಲಾದರೂ ಬೆಳೆ ಬಂದರೆ ಸಾಕು. ಕೆಡಕಿನ ಮಳೆಗಳಾಗದಿದ್ದರೆ ನಮ್ಮದು ಅಭಾವ ಪರಿಸ್ಥಿತಿಯೆಂದರೆ ಯಾವ ತಪ್ಪಾಗಲಿಕ್ಕಿಲ್ಲ.

ಸೆಪ್ಟಂಬರ ಮಿಡಲ್ ಮತ್ತು ನವೆಂಬರ್ ಮಿಡಲ್ ವರದಿ ಈಗಾಗಲೇ ಒಪ್ಪಿಸಿದಂತೆ ಜನವರಿ ಮಿಡಲ್ ವರದಿ ಒಪ್ಪಿಸುವುದಿದ್ದಲ್ಲಿ ಸಮೀಕ್ಷೆ ಮಾಡಿ ವಿಜಾಪುರ ಜಿಲ್ಲೆಯ ದಕ್ಷಿಣ ಭಾಗದ ತಾಲ್ಲೂಕಿನ ಅಭಾವ ಪರಿಸ್ಥಿತಿ ಅವಲೋಕಿಸಿ ಶೀಘ್ರ ಮತ್ತು ಸೂಕ್ತ ಪರಿಹಾರ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸಿ ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ಗುಡಿ ಕೈಗಾರಿಕೆಗಳ ಮೇಲಿನ ಚರ್ಚೆಯಲ್ಲಿ ಮಾಡಿದ ಭಾಷಣ

04.07.1977

**ಶ್ರೀ ಬಿ.ಎಂ. ಹೊರಕೇರಿ** (ಗುಳೇದಗುಡ್ಡ)- ಸನ್ಮಾನ್ಯ ಅಧ್ಯಕ್ಷೀಣಿಯವರೆ ಈಗಾಗಲೇ ಮಾನ್ಯ ಸಚಿವರು ಮಂಡಿಸಿರುವ ಬೇಡಿಕೆಗಳನ್ನು ನನ್ನ ಅನೇಕ ಜನ ಮಾನ್ಯ ಸ್ನೇಹಿತರುಗಳು ಸ್ವಾಗತಿಸಿ ಮಾತನಾಡಿದ್ದಾರೆ:

ಮೊದಲನೆಯದಾಗಿ ಹೇಳುವುದಾದರೆ ಶಿವರಾಂನ್ ಕಮಿಟಿ ವರದಿಯನ್ವಯ ರಾಜ್ಯ ಸರ್ಕಾರವು ಕರ್ನಾಟಕ ಹ್ಯಾಡ್‌ಲೂಂ ಡೆವಲಪ್‌ಮೆಂಟ್ ಕಾರ್ಪೋರೇಷನ್ ಮುಖಾಂತರ ಕೈಮಗ್ಗದ ಅಭಿವೃದ್ಧಿ ಮಾಡಿ ತನ್ಮೂಲಕ ಬಡ ನೇಕಾರರ ದಾರುಣ ಪರಿಸ್ಥಿತಿಯನ್ನು ಸುಧಾರಿಸುವುದಕ್ಕಾಗಿ ಕಾರ್ಯಕ್ರಮಗಳನ್ನು ಹಾಕಿಕೊಂಡದ್ದಾಗಿದೆ. ಬನಹಟ್ಟಿ, ಇಲಕಲ್ಲುಗಳಲ್ಲಿ ನೇಕಾರರ ಅಭಿವೃದ್ಧಿ ಪ್ರಗತಿಯಲ್ಲಿದೆ. ಬಿಜಾಪುರ ಜಿಲ್ಲೆಯಲ್ಲಿ 32 ಸಾವಿರ ನೇಕಾರರ ಕುಟುಂಬಗಳು ಇದ್ದು ರಾಜ್ಯದ ಇತರ ಪ್ರದೇಶಕ್ಕಿಂತ ಹೆಚ್ಚಾಗಿವೆ. ಬಾದಾಮಿ-ಹುನಗುಂದ ತಾಲ್ಲೂಕುಗಳಲ್ಲಿ ನೇಕಾರರ ಸಂಖ್ಯೆ ತುಂಬಾ ಹೆಚ್ಚಾಗಿವೆ ಎಂದರೆ ತಪ್ಪಾಗಲಿಕ್ಕಿಲ್ಲ. ಗುಳೇದಗುಡ್ಡ-ಇಲಕಲ್ಲು-ಕಮತಗಿ-ಅಮೀನಗಡ, ಸೂಳಿಭಾವಿ-ಗುಡೂರು, ಕೇರೂರು, ಶಿರೂರು, ಬದಾಮಿ, ಬೇಲೂರು, ಗೋವನಕೊಪ್ಪ ಗ್ರಾಮಗಳಲ್ಲಿ ನೇಕಾರರು ಹೆಚ್ಚಾಗಿದ್ದು ಇವು ನೇಕಾರರ ಹಳ್ಳಿಗಳೇ ಆಗಿವೆ. ಗುಳೇದಗುಡ್ಡ-ಇಲಕಲ್ಲ ನಗರಗಳಲ್ಲಿ 10 ಸಾವಿರ ನೇಕಾರರ ಕುಟುಂಬಗಳಿವೆ. ಸದ್ಯ ಕಾರ್ಯಗತದಲ್ಲಿದ್ದ "ಕರ್ನಾಟಕ ಕೈಮಗ್ಗ ಅಭಿವೃದ್ಧಿ ಮಂಡಳಿ"ಯು ಸಮೀಕ್ಷೆ ಕೆಲಸ ಪೂರೈಸಿ ಬಡ ನೇಕಾರರಿಗೆ ಹಣಕಾಸಿನ ನೆರವು, ತಯಾರಾದ ಸರಕಿನ ಮಾರಾಟ, ಸುಧಾರಿಸಿದ ಉಪಕರಣ, ಕಚ್ಚಾಮಾಲು, ಪೂರೈಕೆ ಅಗತ್ಯವಿದ್ದ ತಾಂತ್ರಿಕ ಶಿಕ್ಷಣ, ವಸತಿ ಗೃಹ ಯೋಜನೆಗಳನ್ನು ಕಾರ್ಯಾಚರಣೆಯಲ್ಲಿ ತರುತ್ತಲಿದೆಯೆನ್ನೋ ನಿಜ. ಇವನ್ನು ತ್ವರಿತ ಗತಿಯಲ್ಲಿ ತಂದು ನೇಕಾರರಿಂದ ತುಂಬಿದ ಗ್ರಾಮಗಳಲ್ಲಿರುವ ಬಡ ನೇಕಾರರಿಗೆ ಇದರ ಲಾಭ ದೊರೆಯುವಂತಾಗಬೇಕು. ಈ ಯೋಜನೆಯ ಲಾಭ ದೊರಕುವ ವರೆಗೆ ನಾನು ಸರ್ಕಾರದಲ್ಲಿ ಒಂದು ಮನವಿ ಮಾಡಿಕೊಳ್ಳುವುದೇನೆಂದರೆ. ಆಯಾ ಗ್ರಾಮದಲ್ಲಿರತಕ್ಕಂತ ಸರ್ಕಾರಿ ಷೆಡ್ಯೂಲ್ಡ್ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ಕೆನರಾ ಬ್ಯಾಂಕ್, ಸ್ಟೇಟ್ ಬ್ಯಾಂಕ್‌ಗಳು ಬಡ ನೇಕಾರರಿಗೆ ಡಿ.ಐ.ಆರ್. ಯೋಜನೆಯ ಪ್ರಕಾರ ಸಾಲ ಒದಗಿಸುವ ವ್ಯವಸ್ಥೆ ಮಾಡಬೇಕು. ಏಕೆಂದರೆ ನನಗೆ ತಿಳಿದ ಮಟ್ಟಿಗೆ ಬ್ಯಾಂಕ್‌ನ

ಅಧಿಕಾರಿಗಳು ಈ ದಿಸೆಯಲ್ಲಿ ಮುತುವರ್ಜಿ ವಹಿಸಲಾರದವರಾಗಿದ್ದಾರೆ. ಬ್ಯಾಂಕ್‌ನ ನಿಯಮಗಳ ಪ್ರಕಾರ ಅವರು ನೇಕಾರರಿಗೆ ಈ ವರೆಗೆ ಕೊಟ್ಟಿರುವ ಹಣ ನೋಡಿದರೆ ಅವರ ಅಂಕಿ ಸಂಖ್ಯೆಗಳಿಂದಲೇ ನಮಗೆ ಗೊತ್ತಾಗುತ್ತದೆ. ಇವರು ಸರಿಯಾಗಿ ಹಣವನ್ನು ವಿತರಣೆ ಮಾಡಿಲ್ಲ ಆದುದರಿಂದ ನಾನು ತಮ್ಮಲ್ಲಿ ಕೇಳಿಕೊಳ್ಳುವುದೇನೆಂದರೆ ಈ ಬಡ ಜನರಿಗೆ ಡಿ.ಐ.ಆರ್. ಯೋಜನೆಯ ಕೆಳಗೆ ಸಾಕಷ್ಟು ಹಣವನ್ನು ಸಾಲ ಕೊಡುವಂತೆ ವ್ಯವಸ್ಥೆ ಮಾಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ.

ಇಷ್ಟೇ ಅಲ್ಲದೆ ಇಳಕಲ್ಲಿನಲ್ಲಿರುವ ಯೋಜನೆಯು ಕೆಲವು ಹಳ್ಳಿಗಳಿಗೆ ಸೀಮಿತವಾಗಿದೆ. ಇನ್ನುಳಿದ ನೇಕಾರರ ಹಳ್ಳಿಗಿಳಿಗೆ ಕಾಲಕ್ರಮೇಣ ಲಾಭಲಭಿಸುವಂತೆ ಕಾರ್ಪೋರೇಷನ್‌ನವರು ಬಾದಾಮಿ ತಾಲ್ಲೂಕಿನ ಕೆರೂರು-ಬಾದಾಮಿ, ಬೇಲೂರು, ಗೋವನಕೊಪ್ಪಗ್ರಾಮಗಳಿಗೂ, ಬಾಗಲಕೋಟೆ ತಾಲ್ಲೂಕಿನ ಶಿರೂರ-ಹವೇಲೆಗಳಿಗೂ ವಿಸ್ತರಿಸಬೇಕಾಗಿ ಪ್ರಾರ್ಥನೆ.

ಮಾನ್ಯ ಸದಸ್ಯರಾದ ಶ್ರೀ ಮಾನ್ ಭಂಗಿಯವರು ವಿಷದಪಡಿಸಿದಂತೆ ನೇಕಾರ ಗ್ರಾಮಗಳಲ್ಲಿ ನೇಕಾರ ಸಹಕಾರ ಸಂಘಗಳು ಕಾರ್ಯಗತವಾಗಿರುವುದು ನಿಜ. ಆದರೆ ಅವೆಲ್ಲಾ ಒಂದಿಲ್ಲೊಂದು ಕಾರಣದಿಂದ ಸ್ಥಗಿತಗೊಂಡಿವೆಯೆಂದು ಹೇಳಲು ತುಂಬಾ ಖೇದವಾಗುತ್ತದೆ. ಇವುಗಳನ್ನು ಕೆಲಸ ಮಾಡುವಂತೆ ಮಾಡಬೇಕೆಂದು ತಮ್ಮಲ್ಲಿ ಮತ್ತೊಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಇನ್ನು ರೇಷ್ಮೆ ವ್ಯವಸಾಯ ಕುರಿತು ಹೇಳಬೇಕೆಂದರೆ ಇದೊಂದು ಗ್ರಾಮೀಣ ಕಸಬು. ಹಳೇ ಮೈಸೂರಿನಲ್ಲಿ ರೇಷ್ಮೆ ವ್ಯವಸಾಯ ಅನೇಕ ವರ್ಷಗಳಿಂದ ಬೆಳೆಯುತ್ತಾ ಬಂದಿದೆ ಎಂದು ನನಗನಿಸುತ್ತದೆ. ಉತ್ತರ ಕರ್ನಾಟಕದಲ್ಲಿ ಈ ವ್ಯವಸಾಯದ ಅನುಭವವಿಲ್ಲ. ಈ ರೇಷ್ಮೆ ವ್ಯವಸಾಯವು ಗ್ರಾಮಾಂತರದಲ್ಲಿ ವ್ಯವಸಾಯಗಾರರಿಗೆ ವರ್ಷಾನುಕಾಲವು ಕೆಲಸ ಒದಗಿಸಿ ಕೊಡುವುದು. ಇವತ್ತು ದಾಂಡೇಲಿ ಮುಂತಾದ ಕಡೆಗಳಿಗೆ ಕೃಷಿ ಕಾರ್ಮಿಕರು ವ್ಯವಸಾಯ ಕೆಲಸ ಇಲ್ಲದೆ, ವ್ಯವಸಾಯ ಕೆಲಸ ಇಲ್ಲದ ಸಮಯದಲ್ಲಿ ಊರು ಬಿಟ್ಟು ಹೊರಗೆ ಹೋಗುತ್ತಾರೆ. ಈ ಭಾಗಗಗಳಲ್ಲಿ ರೈತರಿಗೆ ಕೆಲಸವಿಲ್ಲದ ಸಮಯದಲ್ಲಿ ರೇಷ್ಮೆ ಕೆಲಸ ಪ್ರಾರಂಭ ಮಾಡಿದರೆ ಅವರಿಗೆ ಬಹಳ ಸಹಾಯ ಮಾಡಿದಂತಾಗುತ್ತದೆ. ಅವರು ಕೂಡ ಹೊರಗಡೆ ಹೋಗುವುದಿಲ್ಲ. ಆದುದರಿಂದ ಮಲಪ್ರಭಾ-ಘಟಪ್ರಭಾ, ಕೃಷ್ಣಾ ಯೋಜನೆಗಳ ಕೆಳಗೆ ಮಲ್ಬಾರಿ ಬೆಳೆಯನ್ನು ಬೆಳೆಸಿ ರೇಷ್ಮೆ ಸಾಗುವಳಿಗೆ ಅನುಕೂಲ

ಮಾಡಿಕೊಡಬೇಕು. ನಮ್ಮ ಕಡೆ ಗುಡ್ಡಗಾಡು ಪ್ರದೇಶ ಜಾಸ್ತಿ ಇವೆ. ಅಲ್ಲಿ ಮರ ಗಿಡಗಳು ಬಹಳವಾಗಿ ಬೆಳೆಯುತ್ತವೆ. ಸಾಮಾನ್ಯವಾಗಿ ಮಾರ್ಚ್, ಎಪ್ರೀಲ್ ತಿಂಗಳ ಸಮಯದಲ್ಲಿ ರೇಷ್ಮೆ ಉಳುವಿನಂತಹ ಒಂದು ಜಾತಿಯ ಹುಳುಗಳು ಹುಟ್ಟಿಕೊಂಡು ಹೆಬ್ಬೇವಿನ ಮರಗಳಲ್ಲಿರುವ ಎಲೆಗಳನ್ನೆಲ್ಲಾ ತಿಂದು ಒಂದು ರೀತಿ ದಾರವನ್ನು ಬಿಟ್ಟು ಹೋಗುತ್ತವೆ. ಬಹುಶಃ ಇದು ಕೂಡ ಒಂದು ರೀತಿಯ ರೇಷ್ಮೆ ಇರಬಹುದೆಂದು ನನಗನಿಸುತ್ತದೆ. ಇದರ ಬಗ್ಗೆ ಸಂಶೋಧನೆ ನಡೆಸಿ ಅದರ ಗುಣ ಧರ್ಮವನ್ನು ನೋಡಿ ಉಪಯೋಗಿಸಿಕೊಳ್ಳಲು ಸಾಧ್ಯವಾದರೆ ಉಪಯೋಗಿಸಿ ಕೊಳ್ಳಬೇಕೆಂದು ಸರ್ಕಾರದವರಲ್ಲಿ ಪ್ರಾರ್ಥನೆ ಮಾಡುತ್ತೇನೆ.

ಇನ್ನು ನಮ್ಮ ಬಾದಾಮಿ ತಾಲ್ಲೂಕಿನ ಕೈಗಾರಿಕೆಯನ್ನು ಕುರಿತು ಒಂದೆರಡು ಮಾತನ್ನು ಹೇಳಬಯಸುತ್ತೇನೆ. ಬಾದಾಮಿ ತಾಲ್ಲೂಕು ಉಸುಕು ಭೂಮಿಯನ್ನು ಹೊಂದಿರತಕ್ಕಂತ ಪ್ರದೇಶವಾಗಿರುತ್ತದೆ. ಈ ಭೂಮಿಯಲ್ಲಿ ಶೇಂಗಾ ಬೆಳೆಯಲು ವಿಫುಲವಾಗಿ ಬೆಳೆಯುತ್ತದೆಂಬುದಾಗಿ, ಬಡವರ ಬಾದಾಮಿ ಎಂಬುದಾಗಿ ಬಾದಾಮಿ ಗ್ರಾಮದ ಹೆಸರು ಬಂದಿದೆ. ಈ ಪ್ರದೇಶದಲ್ಲಿ ವರ್ಷಕ್ಕೆ 5 ಲಕ್ಷ ಕ್ವಿಂಟಾಲನಷ್ಟು ಶೇಂಗಾ ಉತ್ಪನ್ನ ಮಾಡಬಹುದು. ಶೇಂಗಾದಿಂದ ತಯಾರಿಸತಕ್ಕ ವನಸ್ಪತಿ ತುಪ್ಪದ ಕಾರ್ಖಾನೆ, ಸಬಕಾರದ ಕಾರ್ಖಾನೆ, ಶೇಂಗಾದ ಹಿಂಡಿಯ ಬಿಸ್ಕಟ್ಟು ಕಾರ್ಖಾನೆ ಇತ್ಯಾದಿಗಳನ್ನು ತಯಾರಿಸತಕ್ಕಂತ ಒಂದು ಕಾರ್ಖಾನೆಯನ್ನು ಇಲ್ಲಿ ಪ್ರಾರಂಭಿಸಬೇಕೆಂದು ಕೇಳಿಕೊಳ್ಳುತ್ತೇನೆ. ಶೇಂಗಾದ ಕವಚ (Husk) ದಿಂದ ರಟ್ಟಿನ ಕಾರ್ಖಾನೆ ಪ್ರಾರಂಭಿಸಬಹುದು. ಇದರಿಂದ ರೈತರಿಗೆ ಬೆಳೆದ ಶೇಂಗಾಕ್ಕೆ ಸರಿಯಾದ ಬೆಲೆ ಸಿಕ್ಕುವುದಲ್ಲದೇ ಅನೇಕರಿಗೆ ಉದ್ಯೋಗಾವಕಾಶ ಲಭಿಸುತ್ತದೆಂದು ಹೇಳಬಯಸುತ್ತೇನೆ.

ಇನ್ನು ಬಿಜಾಪುರ ಜಿಲ್ಲೆಯ ಉತ್ತರ ಪ್ರದೇಶವು ಕೃಷ್ಣಾ ನದಿಯಿಂದ ಉತ್ತರದ ಭೀಮಾ ನದಿಯವರೆಗಿರುವ ಈ ಪ್ರದೇಶವು ಮುಖ್ಯತಃ ಡೆಕ್ಕನ್ ಟ್ರಾಫ್ ರಾಕ್‌ದಿಂದ ಕೂಡಿದ ಭೂಮಿ ಇದ್ದು ಏರಿಳಿತಗಳಿಂದ ಅಂದರೆ ಹಳ್ಳದಿನ್ನೆಗಳಿಂದ ಕೂಡಿದ ಪ್ರದೇಶವಾಗಿರುತ್ತದೆ. ಇಲ್ಲಿ ವಿಶೇಷವಾಗಿ ಬಂಜರು ಭೂಮಿ ಇದ್ದು ಕೇವಲ ಹುಲ್ಲು ಮಾತ್ರ ಬೆಳೆಯಲು ಸಾಧ್ಯವಿರುತ್ತದೆ. ಇಂತಹ ವಿಶಾಲವಾದ ಪ್ರದೇಶದಲ್ಲಿ ಕತ್ತಾಳೆ ಬೆಳೆಯಲು ಸಾಧ್ಯ. ಈ ಕತ್ತಾಳೆ ಬೆಳೆಯಿಂದ ಸಧ್ಯ ವಿಜಾಪುರ ಜಿಲ್ಲೆಯಿಂದ ಕಚ್ಚಾನಾರು ತಯಾರಾಗಿ ಟನ್‌ಗಟ್ಟಲೇ ವ್ಯಾಗನ್‌ಗಟ್ಟಲೇ ಕಲ್ಕತ್ತೆಗೆ ರವಾರಣೆಯಾಗುತ್ತಲಿದೆ. ಆದ್ದರಿಂದ

ಹೆಚ್ಚು ಕ್ಷೇತ್ರದಲ್ಲಿ ಇದನ್ನು ಬೆಳೆಸಿದಲ್ಲಿ ನಾಲ್ಕು ವರ್ಷದಲ್ಲಿ ಬೆಳೆ ಬಂದು ವಿಫುಲವಾದ ನಾರು ಉತ್ಪನ್ನವಾಗುತ್ತದೆ. ಪರ ರಾಜ್ಯಗಳಿಗೆ ಈ ನಾರನ್ನು ಕಳುಹಿಸಿದರೆ ರಾಜ್ಯದಲ್ಲಿ ನಾರಿನ ಅಭಿವೃದ್ಧಿ ಯೋಜನೆಯಿಂದ ಒಳ್ಳೆ ಬಟ್ಟೆ ಇನ್ನಿತರ ಪಕ್ಕಾ ಮಾಲು ತಯಾರಿಸಿದಲ್ಲಿ ವಿದೇಶಿ ವಿನಿಮಯಕ್ಕೂ ಅನುಕೂಲವಾಗುತ್ತದೆ. ವಿಜಾಪುರ ಜಿಲ್ಲೆಯಲ್ಲಿ ಉತ್ತರ ಭಾಗದಲ್ಲಿ ಕತ್ತಾಳೆ ಬೆಳೆಯನ್ನು ಖಾಸಗಿ ಹಾಗೂ ಸರ್ಕಾರಿ ಭೂಮಿಯಲ್ಲಿ ಬೆಳೆಸುವುದರೊಂದಿಗೆ ಮುಂದೆ ಪಕ್ಕಾಮಾಲನ್ನಾಗಿ ವರ್ತಿಸುವುದಾಗಿ ಫೈಬರ್ ಡೆವಲಪ್‌ಮೆಂಟ್ ಸ್ಕೀಮ್‌ಗೂ ಅನುಕೂಲವಾಗುತ್ತದೆ. ಆದ್ದರಿಂದ ಈ ಕಾರ್ಖಾನೆಯನ್ನು ಕಾರ್ಯಗತಮಾಡಬೇಕೆಂದು ಪ್ರಾರ್ಥನೆ.

ಬಾದಾಮಿ, ಬಾಗಲಕೋಟೆ ತಾಲೂಕಿನಲ್ಲಿ ಖನಿಜ ಸಂಪತ್ತು ಅಪಾರವಾಗಿದೆ. ಗಣಿ ಇಲಾಖೆಯವರು ಈಗಾಗಲೇ ಸಮೀಕ್ಷೆಯನ್ನು ಮಾಡಿರುತ್ತಾರೆ. ಕಗಲಗೊಂಬ, ಸೂಳೇಕೇರಿ, ನೀರ ಭೂದಿಹಾಳ, ಯಳ್ಳಿಗುತ್ತಿ ಗ್ರಾಮ ಪ್ರದೇಶದಲ್ಲಿ ದೊರೆಯುತಕ್ಕ ಖನಿಜಗಳನ್ನು ಈಗಾಗಲೇ ಸಂಶೋಧಿಸಿರುತ್ತಾರೆ. ಹೀಗೆ ರಾಜ್ಯದಲ್ಲಿಯ ಸಂಪನ್ಮೂಲಗಳನ್ನು ಸಂಶೋಧಿಸಿ ಖನಿಜ ಸಂಪತ್ತಿನ ಲಾಭವನ್ನು ಪಡೆದು ಅಭಿವೃದ್ಧಿ ಮಾಡುವುದಾಗಿ ಸರ್ಕಾರದಲ್ಲಿ ಪ್ರಾರ್ಥನೆ ಮಾಡಿಕೊಂಡು ಇಷ್ಟು ಹೇಳಿ ನನಗೆ ಮಾತನಾಡಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ಅಧ್ಯಕ್ಷರನ್ನು ಅಭಿನಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

* * * * *

# ಸಹಕಾರಿ ಬೇಸಾಯ ಸಂಘಗಳ ಮೇಲಿನ ಚರ್ಚೆಯಲ್ಲಿ ಮಾಡಿದ ಭಾಷಣ

06.07.1977

**ಶ್ರೀ ಬಿ.ಎಂ. ಹೊರಕೇರಿ** (ಗುಳೇದಗುಡ್ಡ)-- ಸನ್ಮಾನ್ಯ ಸಭಾಧ್ಯಕ್ಷಿಣಿಯವರೆ ಈವರೆಗೆ ಅನೇಕ ಸ್ನೇಹಿತರು ಸಹಕಾರ ಬೇಡಿಕೆಯ ಮೇಲೆ ತಮ್ಮ ಮಾತುಗಳನ್ನು ಹೇಳಿದ್ದಾರೆ. ನಾನು ಹೇಳುವುದು ಏನೆಂದರೆ ಈಹೊತ್ತು ಸಹಕಾರಿ ಸಚಿವರು ಮಂಡಿಸಿದ ಬೇಡಿಕೆಯನ್ನು ಸ್ವಾಗತಿಸಿ ಸಹಕಾರಿ ಬೇಸಾಯ ಸಂಘಗಳ ಕಾರ್ಯಕ್ರಮವನ್ನು ರಾಷ್ಟ್ರೀಯ ಮಹಾಪುರುಷರಾದ ಮಹಾತ್ಮ ಗಾಂಧೀಜಿಯವರೂ, ಗುರುದೇವ ಠಾಗೋರರು, ಪಂ.ನೆಹರೂರವರೂ, ಅರ್ಥಶಾಸ್ತ್ರಜ್ಞ ಡಾ.ಗಾಡಗೀಳರವರೂ ಒಳ್ಳೆ ಆಸ್ಥೆ ವಹಿಸಿ ತುಂಬು ಹೃದಯದಿಂದ ಸಹಕಾರಿ ಬೇಸಾಯಕ್ಕೆ ಬೆಂಬಲ ಕೊಟ್ಟರು. ನಮ್ಮ ರಾಜ್ಯದಲ್ಲಿ ಸಹಕಾರಿ ಬೇಸಾಯವು ಕಳೆದ ಒಂದೆರಡು ದಶಕಗಳಿಂದ ಕಾರ್ಯಗತವಾಗುತ್ತಾ ಬಂದದ್ದೇನೋ ನಿಜ. ಸರಕಾರವು ಒಂದು ಯೋಜನೆಯನ್ನು ತಯಾರಿಸಿ ಮೂಲ ಪೀಠಿಕೆ ಹಾಕಿಕೊಂಡ್ಡದ್ದಾಯಿತು. ಆದರೆ ಈ ಕಾರ್ಯಕ್ರಮವು ಅಷ್ಟೊಂದು ಸಮಾಧಾನಕರವಾಗಿ ಪ್ರಗತಿಯಾಗದೆ, ನಿರೀಕ್ಷಿಸಿದ ಫಲಿತಾಂಶವು ದೊರಕಲಿಲ್ಲವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಸರಕಾರದವರು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಸಾಕಷ್ಟು ಹಣವನ್ನು ನೆರವನ್ನು ಒದಗಿಸಿ ಯಶಸ್ವಿ ಮಾಡಲು ಯತ್ನಿಸಿದ್ದಾಯಿತು. ಮಂದಗತಿಯಿಂದ ಕಾರ್ಯಕ್ರಮವು ನಡೆಯಿತೇನೋ ನಿಜ. ಆದರೆ ಇದರ ಬಗ್ಗೆ ಸರಕಾರ ಅಧಿಕಾರಿಗಲ್ಲಿಯೂ, ಜನತೆಯಲ್ಲಿಯೂ ಅನಾಧರಣೆ ಭಿನ್ನಾಭಿಪ್ರಾಯ ಕಂಡುಬಂದವು. ಯಾವುದೇ ಸಹಕಾರಿ ಕಾರ್ಯಕ್ರಮವು ಯಶಸ್ವಿಯಾಗಬೇಕಾದರೆ ಸ್ಥಳೀಯ ನಾಯಕತ್ವ (Local Leadership)ದ ಅಗತ್ಯವಿದೆ. ಆ ತರದ ನಾಯಕತ್ವವನ್ನು ಹುಟ್ಟಿಸುವಂತಹ ಯೋಜನೆ ಸರಕಾರ ಕೈಗೊಳ್ಳಬೇಕಾಗಿತ್ತು. ಎಲ್ಲರಿಗೂ ಗೊತ್ತಿದ್ದಂತೆ ಸಹಕಾರಿ ಚಳುವಳಿಯ ಸಮಸ್ಯೆ ಯಶಸ್ವಿಯಾಗಬೇಕಾದರೆ ಅಲ್ಲಿಯ ಸದಸ್ಯರ ನಾಯಕರ ಹೊಂದಾಣಿಕೆ ಸದ್ಭಾವನೆಯ ಪ್ರವೃತ್ತಿ ಅಗತ್ಯ. ಉತ್ತರ ಕರ್ನಾಟಕದಲ್ಲಿ ಒಂದು ನಾಣ್ನುಡಿ ಇದೆ. "ಆಳಿಗೆ ಆಳು ಕೂಡಿದರೆ ಮೇಳಾಗಲು (ಸಹಕಾರ ಮಾಡಲು) ಬೇನೆ ಬಂದಿತು"ಎಂದು. ಇಂಗ್ಲೀಷಿನಲ್ಲಿ ನಾಣ್ನುಡಿಯಂತೆ Each for all and all for each ಎಂದು

ಹೇಳುತ್ತಾರೆ. ಹೀಗೆ ನಾಣ್ನುಡಿಯು ಸದ್ಭಾವನೆ ಇದ್ದಾಗ್ಯೂ ಇನ್ನೊಂದು ಮಾತಿನನ್ವಯದಂತೆ ಅಂದರೆ –Every body's work is no body's work ಅಂತಾ ನಮ್ಮ ಸಹಕಾರ ಚಳುವಳಿ ಪ್ರಗತಿಯಾಗಿಲ್ಲ.

ಸಹಕಾರಿ ಬೇಸಾಯದಲ್ಲಿ ಸಾಧಕ ಭಾದಕ(Merits and demerits)ಗಳು ಇವೆ. ಬಾಧಕಗಳಿಗಿಂತಲು ಸಾಧಕಗಳು ಹೆಚ್ಚಾಗಿದ್ದಾಗ್ಯೂ ಅವುಗಳ ಉಪಯೋಗ ಮಾಡಿಕೊಳ್ಳುವ ನಮ್ಮ ಜನ ಮುಂದೆ ಬಾರದವರಾಗಿದ್ದಾರೆ. ಅದಕ್ಕೆ ಕಾರಣ ಜನತೆಯಲ್ಲಿಯ ಅಜ್ಞಾನ–ಹಾಗೂ ಒಂದುಗೂಡಿ ಹೋಗುವ ಭಾವನೆಯ ಅಭಾವ ಕಾರಣ. ಪೂರ್ವ ಜರ್ಮನಿಯಲ್ಲಿ ಈ ಸಹಕಾರ ಬೇಸಾಯ ತುಂಬಾ ಹಾಗೂ ತ್ವರಿತ ಗತಿಯಿಂದ ಮುಂದುವರಿದಿದ್ದು ನೂರಕ್ಕೆ ತೊಂಬತ್ತೈದು ಕ್ಷೇತ್ರ ಸಹಕಾರಿ ಬೇಸಾಯುವನ್ನು ಅಳವಡಿಸಿಕೊಂಡದ್ದಾಗಿದೆ. ಈ ಸಹಕಾರ ಬೇಸಾಯುದ ಕಾರ್ಯಕ್ರಮವು ಪುನರ್ವಸತಿ ಯೋಜನೆ ಹಾಗೂ ಅಭಿವೃದ್ಧಿ ಯೋಜನೆಯನ್ವಯ ನಮ್ಮ ಸರಕಾರ ಹಾಕಿಕೊಂಡಿತು. ಈ ಯೋಜನೆಯಲ್ಲಿ ಗುರುತಾಯಿಸಿದ ಹಣಕಾಸಿನ ಸಫಲತೆ ಅದರ ಲಾಭ ನಷ್ಟಗಳ ಮೇಲೆ ಅಳತೆ ಮಾಡದೇ ಈ ಕಾರ್ಯಕ್ರಮದಲ್ಲಿ ತೊಡಗಿದ ಬಡ ಕುಟುಂಬಗಳ ಉದ್ಯೋಗ ಹಾಗೂ ಅವರು ನಡೆಯಿಸುವ ಜೀವನವನ್ನು ನಾವು ಲಕ್ಷಿಸಬೇಕೇ ಹೊರ್ತು ಉಳಿದದ್ದನ್ನಲ್ಲ.

ನಮ್ಮ ರಾಜ್ಯದ ಬೇಸಾಯ ಸಂಘದ ಕಾರ್ಯಕ್ರಮವನ್ನು ಸಿಂಹಾವಲೋಕನ ಮಾಡಿದಲ್ಲಿ ಕರ್ನಾಟಕ ರಾಜ್ಯದಲ್ಲಿ 1972 ನೇ ಜೂನ್ ಅವಧಿಗೆ 12 ಲಕ್ಷ ರೂಪಾಯಿ ಆರ್ಥಿಕ ನೆರವನ್ನು ಸುಮಾರು 600 ಬೇಸಾಯ ಸಹಕಾರಿ ಸಂಘಗಳಿಗೆ ಕೊಡಲಾಗಿತ್ತು. ಒಟ್ಟು 65 ಸಾವಿರ ಎಕರೆಗೂ ಮಿಕ್ಕಿ ಈ ಕಾರ್ಯಕ್ರಮದಲ್ಲಿ ಅಳವಡಿಸಲಾಯಿತು. ಈ ಕ್ಷೇತ್ರದಲ್ಲಿ ಅಂದಾಜು 40,500 ಎಕರೆ ಭೂಮಿಯಲ್ಲಿ ಈ ಹಣಕಾಸಿನ ನೆರವು ಪಡೆದು ಸಾಗುವಳಿ ತರಲಾಯಿತು. ಜೊತೆಗೆ ಈ ಸಂಘದಲ್ಲಿ ತೊಡಗಿದ ಕುಟುಂಬಗಳ ಶ್ರಮ–ದುಡಿಮೆ, ಮನವಿ, ಶಕ್ತಿ ಸಾಗುವಳಿ ಇವೆಲ್ಲ ಪರಿಗಣಿಸಿದಲ್ಲಿ ಸರಕಾರದಿಂದ ಪ್ರತಿ ಎಕರೆಗೆ ಪಡೆದ 300 ರೂಪಾಯಿ ಆರ್ಥಿಕ ಸಹಾಯ ಜೊತೆಗೆ 200 ರೂಪಾಯಿ ಶ್ರಮ–ಇತರ ದುಡಿಮೆಯಿಂದ ದೊರೆತು ಪ್ರತಿ ಎಕರೆಗೆ ಒಂದು ಸಾವಿರ ರೂಪಾಯಿ ಸಾಗುವಳಿ ಖರ್ಚು ಬಂದತಾಯಿತು. ಈ ಸರಕಾರದ ಹಣದಿಂದ 16 ಸಾವಿರ ಬಡ ಕುಟುಂಬಗಳ ಹಾಗೂ ಚಿಕ್ಕ ಹಿಡುವಳಿದಾರರಿಗೆ

ನೆರವು ಕೊಟ್ಟಂತಾಯಿತು. ಹೀಗೆ ಉದಾತ್ತವಾದ ಧ್ಯೇಯದಿಂದ ಪ್ರಾರಂಭವಾದ ಸಹಕಾರಿ ಬೇಸಾಯ ಮುಂದೆ ಕ್ರಮೇಣ ಪ್ರಗತಿಯಾಗದೆ ಅದು ಕುಂಠಿತವಾಯಿತು. ಅದಕ್ಕೆ ಕಾರಣಗಳು ಅನೇಕ.

1. want of awakening among illiterate small poor farmers regarding advantage of farming societies.
2. Absence of favourable ideological atmosphere for co-oprative farming.
3. Dearth of devote of deligent local leadership to guide and maintaining the co-operative farming societies.
4. Lack of co-ordinated efforts and assistance to the farming societies.

ಈ ಸಹಕಾರಿ ಬೇಸಾಯದ ಅಗತ್ಯತೆಯು ಇನ್ನು ಮುಂದೆ ನಮ್ಮ ರಾಜ್ಯದಲ್ಲಿ ಸರಕಾರ ಮುತುವರ್ಜಿವಹಿಸಿ ಕೈಕೊಳ್ಳಬೇಕಾಗಿದೆ. ರಾಜ್ಯಾದ್ಯಂತವಾಗಿ ಭೂ ಸುಧಾರಣೆ ಕಾಯ್ದೆ ಅಮಲು ಬಜಾವಣೆಯಿಂದ ಅನೇಕ ಭೂರಹಿತ ಕೃಷಿ ಕಾರ್ಮಿಕರಿಗೆ ಒಂದು ಘಟಕ ಅಂದಾಜು 5 ಎಕರೆ 16 ಗುಂಟೆ ಕ್ಷೇತ್ರ ಕೊಟ್ಟದ್ದಾಗಿದೆಯೇನೋ ನಿಜ. ಈ ಭೂ ಸುಧಾರಣೆ ಯೋಜನೆಯನ್ವಯ ದೊರೆತ ಭೂಮಿಯನ್ನು ಈ ಕೃಷಿ ಕಾರ್ಮಿಕರು, ಸಾಗುವಳಿಯನ್ನು ವ್ಯಕ್ತಿಗತ ಭೂಮಿಯ ಒಂದು ಘಟಕವನ್ನು ಸಾಗುವಳಿ ಮಾಡಲು ಒಂದು ಜೊತೆ ಎತ್ತು ಬಂಡಿಗಾಡಿ, ವ್ಯವಸಾಯ ಉಪಕರಣಗಳನ್ನು ಪ್ರತಿಯೊಬ್ಬರು ಇಡಲು ಲೆಕ್ಕಚಾರವಾಗುವುದಿಲ್ಲ. ಕನಿಷ್ಠ 8–10ಜನ ಕೂಡಿದರೆ ಮಾತ್ರ ಸಹಕಾರಿ ಸಾಗುವಳಿ ಮಾಡಿದರೆ ಕನಿಷ್ಠ ಸಾಗುವಳಿ ಒಂದು ಘಟಕ ಕ್ಷೇತ್ರವಾಗುತ್ತದೆ. ಈ ಕ್ಷೇತ್ರಕ್ಕೆ ಒಂದು ಜೊತೆ ಎತ್ತು ಬಂಡಿಗಾಡಿ ಉಳಿದ ಕುಂಟೆ, ರಂಟೆ ಇಡಲು ಸಾಧ್ಯ. ಆದಕಾರಣ ಭೂ ಸುಧಾರಣೆಯನ್ವಯ, 30–40 ಎಕರೆ ಒಂದೆಡೆಗೆ ಹಂಚಿದ ಭೂಮಿಯನ್ನು ಪಡೆದು ಕೃಷಿ ಕಾರ್ಮಿಕರಿಗೆ ಸಹಕಾರಿ ತತ್ವದ ಮೇಲೆ ಸರ್ವಿಸ್ ಸೊಸೈಟಿಗಳೇನಾದರೂ ಮಾಡಲು ಅನಿವಾರ್ಯವಾಗುತ್ತದೆ. ಸದ್ಯದಲ್ಲಿ ಸಹಕಾರಿ ಬೇಸಾಯ ಮಾಡಬೇಕು. ಅದಕ್ಕಾಗಿ ಸರಕಾರ ಸಮಾಲೋಚಿಸಿ ಭೂ ಸುಧಾರಣೆಯನ್ವಯ ಪಡೆದ ಭೂಮಿಗಳಲ್ಲಿ ಸರಿಯಾದ ಉತ್ಪಾದನೆ ಬರುವಂತೆ ಈ ಬಡ ಕುಟುಂಬಗಳಿಂದ ಭೂಮಿಯ ಸಾಗುವಳಿಯ ಕಾರ್ಯಕ್ರಮ ಕೈಕೊಳ್ಳು ಬಹಳ ಮಹತ್ವದ್ದು. ಇಲ್ಲವಾದರೆ

ಭೂ ಸುಧಾರಣೆ ಕಾಯ್ದೆಯನ್ವಯ ಸಾಗುವಳಿ ಕೊಟ್ಟ ಭೂಮಿಗಳ ಹದವರಿತ ಸಾಗುವಳಿ ಹದ ಬೆದೆಯಲ್ಲಿ ಬಿತ್ತನೆ ಒಕ್ಕುವ ಕೆಲಸ ಸರಿಯಾಗಿ ಆಗದೆ, ಭೂ ಸುಧಾರಣೆಯ ಮುಖ್ಯ ಉದ್ದೇಶ ಸಾಧಿಸಿದ ಭೂಮಿ ಪಡೆದ ಬಡ ಕುಟುಂಬಕ್ಕೂ ಪರಿಹಾರ ದೊರಕಲಾರದೆ ನಿಷ್ಫಲವಾಗುತ್ತದೆ. ಅದಕ್ಕಾಗಿ ಸಹಕಾರಿ ಕೃಷಿ ಸೇವಾ ಸಂಘವನ್ನಾಗಲಿ ಸಹಕಾರಿ ಸಾಮೂಹಿಕ ಬೇಸಾಯ ಸಂಘಗಳನ್ನಾಗಲಿ ರಚಿಸಲು ರಾಜ್ಯದ ಎಲ್ಲ ಕಡೆಗೂ ಸರಕಾರ ಕಾರ್ಯಕ್ರಮ ಹಾಕಿಕೊಳ್ಳಬೇಕು.

ಕುಟುಂಬ ಯೋಜನೆಯನ್ನು ಯಾವರೀತಿ ಸರಕಾರ ನಿರ್ವಹಿಸಲು ಕಾರ್ಯಕ್ರಮವನ್ನು ಹಾಕಿಕೊಂಡಿದೆಯೋ ಹಾಗೆ, ರಾಜ್ಯ ಮಟ್ಟದಲ್ಲಿ ತಜ್ಞರ ಒಂದು ಸಮಿತಿ ನೇಮಿಸಿ ಅದರ ಮುಖಾಂತರ ಸಹಕಾರಿ ಬೇಸಾಯ ಸಂಘದ ಒಂದು ರಚನಾತ್ಮಕ ಕಾರ್ಯಕ್ರಮವನ್ನು ಹಾಕಿಕೊಂಡು, ಜಿಲ್ಲಾ ಮಟ್ಟದ ಮೇಲೆ, ತಾಲ್ಲೂಕು ಮಟ್ಟದ ಮೇಲೆ ಕಾರ್ಯ ನಡೆಯಿಸಿದಲ್ಲಿ ಜನತೆಯಲ್ಲಿ ಜಾಗ್ರತೆ ಉಂಟಾಗುವದೆಂಬ ಭರವಸೆ ನನಗಿದೆ. ಈ ಚಳುವಳಿಯಲ್ಲಿ ಆಸಕ್ತಿಯುಳ್ಳವರನ್ನು ತರಬೇತುಗೊಳಿಸಿ ಈ ಮೊದಲು ಹೇಳಿದ ರೀತಿ ಅಗತ್ಯವಿದ್ದಲೆಲ್ಲ ಈ ಸಹಕಾರಿ ಬೇಸಾಯ ಕಾರ್ಯಗತಗೊಳಿಸಬೇಕು. ಭಾರತ ಸೇವಕ ಸಮಾಜ, ಸೇವಾದಳ, ಕೃಷಿ ಸಮಾಜಗಳ ಮುಖಾಂತರವೂ ಈ ಕಾರ್ಯಕ್ರಮದ ಅಭಿವೃದ್ಧಿಯಾಗುವ ಯೋಜನೆ ಹಾಕಿಕೊಳ್ಳಬೇಕು. ಈಗಾಗಲೇ ಕಾರ್ಯಗತದಲ್ಲಿರುವ ಭೂ ಸೇನಾ ಕಾರ್ಪೋರೇಷನ್ (Land army corporation limited) ಮುಖಾಂತರವಾದರೂ ಈ ಕಾರ್ಯಕ್ರಮ ಹಾಕಿಕೊಳ್ಳುವುದರ ಸಾಧಕ ಬಾಧಕಗಳನ್ನು ಪರಾಮರ್ಶಿಸಬೇಕು. ಸೂಕ್ತವಾದ ಕಾರ್ಯಕ್ರಮ ಸಹಕಾರಿ ಕ್ಷೇತ್ರದಲ್ಲಿ ಕೈಕೊಳ್ಳುವುದಾಗಿ ಪ್ರಾರ್ಥನೆ. ಸಹಕಾರಿ ಬೇಸಾಯ ಸಂಘಗಳ ಮಾರ್ಗದರ್ಶನ ಮೇಲ್ವಿಚಾರಣೆ ಹಾಗೂ ಅವುಗಳ ಉತ್ತೇಜನಾರ್ಥಕವಾಗಿ, ರಾಜ್ಯ ಮಟ್ಟದ ಮೇಲೆ ಒಂದು ಸಹಕಾರಿ ಬೇಸಾಯ ಸಲಹಾ ಮಂಡಲವಿದ್ದು ಸಹಕಾರಿ ಸಚಿವರ ನೇತೃತ್ವದಲ್ಲಿ ಆಗಾಗ್ಗೆ ಸಹಕಾರಿ ಬೇಸಾಯ ಸಂಘಗಳ ಸಮಸ್ಯೆಗಳನ್ನು ಸಮಾಲೋಚಿಸಿ ಸೂಕ್ತವಾದ ಕ್ರಮ ತೆಗೆದುಕೊಳ್ಳುತ್ತಿತ್ತು. 1972ರ ಚುನಾವಣೆ ಮುನ್ನವೇ ಆ ಸಲಹಾ ಸಮಿತಿಯು ಕೊನೆಗೊಂಡಂತಾಯಿತೆಂದು ಹೇಳಬಹುದು. ಏಕೆಂದರೆ 1972ರ ನಂತರ ಆ ಸಮಿತಿಯು ತನ್ನ ಕಾರ್ಯಾಚರಣೆಯಲ್ಲವೆಂದು ಹೇಳಬಲ್ಲೆನು.

ಅದರಂತೆ ಜಿಲ್ಲಾ ಮಟ್ಟದ ಮೇಲೆ ಹಾಗೂ ರಾಜ್ಯ ಮಟ್ಟದ ಮೇಲೆ ಸಹಕಾರಿ ಬೇಸಾಯ ಪೆಡರೇಷನ್ನುಗಳು ರಚಿತವಾಗಿ ಕಾರ್ಯಗತವಾಗಿದ್ದವು. ಪ್ರತಿ ವರುಷ ಸರಕಾರದಿಂದ ಕೇಂದ್ರ ಹಾಗೂ ರಾಜ್ಯ ಸರಕಾರಗಳಿಂದ ದೊರೆಯತಕ್ಕ ಹಣಕಾಸಿನ ನೆರವು ಪ್ರಾರಂಭದಲ್ಲಿ ಕೆಲವು ವರುಷ ದೊರೆತು ಮುಂದೆ ಸಿಗದಂತಾಗಿ ಅವುಗಳು ಸಹ ನಿಷ್ಕ್ರೀಯೆಯುಳ್ಳವಾದವು. ಸದ್ಯಕ್ಕೆ ಸರಕಾರ ಈ ಫಾರ್ಮಿಂಗ್ ಸೊಸೈಟಿಗಳನ್ನು ಪುನಪರಾಮರ್ಶಿಸಿ, ಪುನಸಂಘಟಿಸಿ, ಪುನಶ್ಚೇತನವನ್ನು ಉಂಟುಮಾಡಬೇಕು. ಅಗತ್ಯವಿದ್ದ ಹಣಕಾಸಿನ ನೆರವು ತಾಂತ್ರಿಕ ನೆರವು ಕೊಟ್ಟು ಸ್ಥಳೀಯ ನಾಯಕರನ್ನು ಒದಗಿಸಿ ಈ ಸ್ಥಗಿತಗೊಂಡ ಸಂಘಗಳನ್ನು ಚುರುಕುಗೊಳಿಸಿದ್ದಲ್ಲಿ ರಾಜ್ಯಾದ್ಯಂತವಾಗಿ 65 ಸಾವಿರ ಎಕರೆ ಕ್ಷೇತ್ರ ಭೂಮಿಯಲ್ಲಿ ವ್ಯವಸಾಯ ಉತ್ಪಾದನೆ ಮಾಡಿದಂತಾಗುತ್ತದೆ. ಜೊತೆಗೆ ಭೂ ಸುಧಾರಣೆ ಕಾಯ್ದೆಯನ್ವಯು ಭೂ ರಹಿತ ಕೃಷಿ ಕಾರ್ಮಿಕರಿಗೆ ಕೊಟ್ಟ ಭೂಮಿಯಿಂದಲೂ ವ್ಯವಸಾಯ ಉತ್ಪನ್ನಕ್ಕೆ ಅವಕಾಶ ಕೊಟ್ಟಂತಾಗುತ್ತದೆಂದು ಈ ಮೂಲಕ ತಿಳಿಸುವೆ. ಅದಕ್ಕಾಗಿ ಸರಕಾರ ಫಾರ್ಮಿಂಗ್ ಸೊಸೈಟಿಗಳ ಪುನಸಂಘಟನೆ, ಪುಶ್ಚೇತನಕ್ಕಾಗಿ ಕ್ರಮ ಕೈಕೊಳ್ಳಲು ಪ್ರಾರ್ಥಿಸುವೆ. ಅಗತ್ಯವಿದ್ದ ಹಣಕಾಸಿನ ನೆರವು ಕೊಡುವುದಲ್ಲದೆ ರಾಜ್ಯ ಮಟ್ಟದ ಸಹಕಾರಿ ಬೇಸಾಯ ಸಲಹಾ ಮಂಡಲವಾಗಲಿ, ಸಹಕಾರಿ ಬೇಸಾಯ ಸಂಘಗಳ ಫೆಡರೇಷನ್ನಾಗಲಿ, ಜಿಲ್ಲಾ ಮಟ್ಟದ ಫೆಡರೇಷನ್ನುಗಳನ್ನು ಪುನರ್ಸಂಘಟಿಸಿ ಚೇತನಗೊಳಿಸಬೇಕು. ಇನ್ನು ಗ್ರಾಮ ಸೇವಾ ಸಹಕಾರಿ ಸಂಘಗಳನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬೇಕೆಂದರೆ, ಸರಕಾರವು ಇಂತಹ ಸಂಘಗಳ ಅಮಾಲ್ಗಮೇಷನ್ ಕಾರ್ಯಕ್ರಮ ಕೈಕೊಂಡು ಒಂದು ವ್ಯಯಾಬಲ್ ಯೂನಿಟ್ ಆಗುವಂತೆ ಮಾಡಿ, ಒಂದು ವಿಧಾಯಕ ರೀತಿಯಲ್ಲಿ ಕ್ರೆಡಿಟ್ ಬಿಸಿನೆಸ್ ಸರಿಯಾಗಿ ನಡೆಯುವಂತೆ ಗ್ರಾಮ ಸಹಕಾರಿ ಸಂಘಗಳ ಮೂಲಕ ಪ್ರತಿಯೊಬ್ಬ ರೈತನಿಗೂ ಕೃಷಿ ಕಾರ್ಮಿಕರಿಗೂ ಹಳ್ಳಿಯ ಕೈಗಾರಿಕೆ ಕಾರ್ಮಿಕರಿಗೂ ಹಣಕಾಸಿನ ನೆರವು ಕೊಡುವಂತೆ ಯೋಚಿಸಿ ಕಾರ್ಯಕ್ರಮ ಹಾಕಿಕೊಂಡರು. ಗ್ರಾಮಾಂತರದ ಈ ಹೊಂದಾಣಿಕೆ ಹಾಗೂ ಸಹಕಾರವಿದ್ದಕ್ಕೆ ಈ ಯೋಜನೆಯನ್ವಯು ಉಂಟಾದ ಸಂಘಗಳ ರಚನೆ ವಿರುದ್ಧ ರಿಟ್ ಅರ್ಜಿ ಹಾಕಿ ಅನೇಕ ಸಂಘಗಳ ಸಾಲ ವಿತರಣೆ ಕಾರ್ಯಕ್ಕೆ ಆತಂಕವಾಗಿದೆ.

ಸಹಕಾರಿ ಸಂಘಗಳಿಗೆ ಬೆಳೆ ಸಾಲ ಕೊಡುವಾಗ ರಿಸರ್ವ್ ಬ್ಯಾಂಕಿನ ಧೋರಣೆಯನ್ವಯ, ಕೇಂದ್ರ ಸಹಕಾರಿ ಬ್ಯಾಂಕುಗಳು ಗ್ರಾಮ ಸಂಘಗಳಿಗೆ ಎ.ಬಿ.ಸಿ.ಕಾಂಪೋನೆಟ್ ಮೂಲಕ ಸಾಲ ಹಣ ಹಂಚುತ್ತಾರೆ. ಬಿ ಕಾಂಪೋನೆಟ್ ದಲ್ಲಿಯ ಪ್ರಕಾರ ಬೀಜ ಗೊಬ್ಬರ ರಸಾಯನ ಔಷಧಗಳನ್ನು (in kind) ಹಂಚುತ್ತಾರೆ. ರೈತ ತಾನು ಸಂಗ್ರಹಿಸಿದ ಬೀಜ ಗೊಬ್ಬರಗಳನ್ನು ಸೆಂಟ್ರಲ್ ಬ್ಯಾಂಕಿನವರು ಗಣನೆಗೆ ತರಲಾರರು. ದಯವಿಟ್ಟು ಈ ಧೋರಣೆಯಲ್ಲಿ ಸೂಕ್ತ ಬದಲಾವಣೆಯಾಗಿ ರೈತರಿಗೆ ತಮಗೆಬೇಕಾದ ಶುದ್ಧ ಸುಧಾರಿಸಿದ ಬೀಜಗಳನ್ನು ತಮ್ಮ ಆಹಾರ ಧಾನ್ಯದ ಪೂರೈಕೆಗೆ ಕೊರತೆಯನ್ನುಂಟು ಮಾಡಿ ಸಂಗ್ರಿಹಿಸಿ ಉಪಯೋಗಿಸುವುದನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕು. ರಾಸಾಯನಿಕ ಗೊಬ್ಬರ ಬದಲು Farm yard manure compost manure ಗಳನ್ನು ಸಂಗ್ರಹಿಸಿದ್ದನ್ನು ಗಣನೆಗೆ ತೆಗೆದುಕೊಂಡು ಅವುಗಳ ಬೆಲೆಯನ್ನು ನಗದು ಹಣದ ಮೂಲಕ ಸಾಲ ಪೂರೈಸುವ ವ್ಯವಸ್ಥೆಯಾಗಬೇಕು. ಅದಕ್ಕಾಗಿ ರೀಸರ್ವ್ ಬ್ಯಾಂಕಿನ ಸದಸ್ಯದ ಎ ಬಿ ಸಿ ಕಾಂಪೋನೆಂಟಿನಲ್ಲಿ ಸೂಕ್ತ ಬದಲಾವಣೆ ಮಾಡಲು ಪ್ರಾರ್ಥಿಸುವೆ. ಇಷ್ಟು ಹೇಳಲು ಕಾಲಾವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

* * * * *

## ನೀರಾವರಿ ಇಲಾಖೆಯ ಮೇಲಿನ ಚರ್ಚೆಯಲ್ಲಿ ಮಾಡಿದ ಭಾಷಣ
## (ಮಲಪ್ರಭಾ-ಮಹಾದಾಯಿ ನದಿ ಜೋಡಣೆ ಯೋಜನೆ)

**ಶ್ರೀ ಬಿ.ಎಂ. ಹೊರಕೇರಿ** (ಗುಳೇದಗುಡ್ಡ)-ಮಾನ್ಯ ಸಭಾಧ್ಯಕ್ಷರೇ, ನಮ್ಮ ರಾಜ್ಯದ ಬೃಹತ್, ಮಧ್ಯಮ ಮತ್ತು ಚಿಕ್ಕ ನೀರಾವರಿಗಾಗಿ ಸನ್ಮಾನ್ಯ ಮುಖ್ಯ ಮಂತ್ರಿಗಳು, ರಾಜ್ಯಮಂತ್ರಿಗಳು ಮಂಡಿಸಿದ ಬೇಡಿಕೆಗಳನ್ನು ನಾನು ಸ್ವಾಗತ ಮಾಡುತ್ತಾ ಒಂದೆರೆಡು ಮಾತುಗಳನ್ನು ಹೇಳುತ್ತಾ ಇದ್ದೇನೆ ಈ ನೀರಾವರಿ ವಿಚಾರ ಎಂದರೆ ಆಹಾರಕ್ಕಿಂತಲು ನೀರು ಮೊದಲನೆಯದು ಎಂದು ಹೇಳಬಹುದು. ನೀರಿಂದಲೇ ಆಹಾರ ಹುಟ್ಟುತ್ತದೆ. ನೀರು You be give ಹೀಗೆ ಕನ್ನಡದಲ್ಲಿ ನೀರು ಶಬ್ಬಕ್ಕೆಅರ್ಥಪೂರ್ಣವಿದೆ. ಆಪ್ರಕಾರ ನೀರಾವರಿಗೆ ಮಹತ್ವ ಮತ್ತು ಪ್ರಾಶಸ್ತ್ಯ ಕೊಟ್ಟಿದ್ದುಂಟು ಬೃಹತ್ ನೀರಾವರಿಯಲ್ಲಿ ಘಟಪ್ರಭ ಹೇಮಾವತಿ. ಹಾರಂಗಿ ಆಣೆಕಟ್ಟಿನಲ್ಲಿ ನೀರನ್ನು ಸಂಗ್ರಹಿಸುವಂತೆ ಪ್ರಾವಿಜನನ್ನು ಬಜೆಟ್‌ನಲ್ಲಿ ಮಾಡಿದ್ದಾಗಿದೆ. ಮಲಪ್ರಭ ನದಿ ಬೆಳಗಾವಿ ಧಾರವಾಡ, ಬಿಜಾಪುರ ಮತ್ತು ಗುಲಬರ್ಗಾ ಜಿಲ್ಲೆಗಳಲ್ಲಿ ಹರಿಯುತ್ತಾ ಇದೆ. ಇದು ಹರಿಯತಕ್ಕ ಪ್ರಮಾಣ ಅಂದರೆ ಮಲೆನಾಡಿನಲ್ಲಿ ಮಲಪ್ರಭ ಪಾರಂಭವಾಗಿ ನಮ್ಮ ಬಯಲು ನಾಡಿನಲ್ಲಿ ಬರಗಾಲದಲ್ಲಿ ಹರಿಯುತ್ತದೆ. ಅದಕ್ಕೆ ಮಲಪ್ರಭ ಎಡದಂಡೆ, ಬಲದಂಡೆ ಯೋಜನೆ ಎಂದು ಮಾಡಿ ಜನರಿಗೆ ವರಪ್ರಧಾನ ತಂದುಕೊಟ್ಟಿದ್ದಾಗಿದೆ. ಇಂತಹ ಪ್ರಸಂಗದಲ್ಲಿ ಬೃಹತ ನೀರಾವರಿ, ಮಧ್ಯಮ ನೀರಾವರಿ ಮತ್ತು ಚಿಕ್ಕ ನೀರಾವರಿ ಸದ್ಯ ಪ್ರಸಂಗದಲ್ಲಿ ಉಪಯೋಗ ಮುಂದಿನ ಜನಾಂಗಕ್ಕೆ ಅತ್ಯಗತ್ಯವಾದ ಕೆಲಸ ಕಾರ್ಯಗಳು ಆಗುತ್ತಾ ಇವೆ. ಈಗ ಮಲಪ್ರಭಾ ನದಿಯಿಂದ ಕೆಲವೊಂದು ಭಾಗ ಮಾತ್ರ ನೀರಾವರಿಯಾಗುತ್ತಾ ಇದೆ. ನವಿಲುತೀರ್ಥದಲ್ಲಿ ಕಟ್ಟಿದ ಅಣೆಕಟ್ಟಿನಲ್ಲಿ ಸಂಗ್ರಹಿಸಿದ ನೀರಿನ ಸಾಮರ್ಥ್ಯದಿಂದ ಆ ಕ್ಷೇತ್ರದ ಬರಗಾಲದ ಬವಣೆ ತೀರಿಸುವಂತ ಸಂದರ್ಭ ಬರಬಹುದು. ಅದರ ಮುಂದೆ ಇನ್ನೂ ಹಲವಾರು ಫಲವತ್ತಾದ ಕ್ಷೇತ್ರಗಳಿದ್ದು ಅದಕ್ಕೆ ನೀರಿನ ಅಗತ್ಯ ಇದೆಯೆಂದು ಈ ಸಂದರ್ಭದಲ್ಲಿ ಹೇಳಲಿಕ್ಕೆ ಬಯಸುತ್ತೇನೆ. ಬೆಳಗಾವಿಯ ಖಾನಾಪುರ ತಾಲೂಕಿನಲ್ಲಿ ಮಲಪ್ರಭ ಹುಟ್ಟಿ ಸಂಗಮದ ಬಳಿ ಕೃಷ್ಣ ನದಿಗೆ ಕೂಡುತ್ತಾ ಇದೆ. ಅದಕ್ಕೆ ಸಮಾಂತರವಾಗಿ ಮಹದಾಯಿ ನದಿ ಇದೆ. ಮಹಾದಾಯಿ ಎಂದರೆ ದೊಡ್ಡತಾಯಿ ಎಂದು ಆ ನದಿ ಖಾನಾಪುರ ತಾಲ್ಲೂಕಿನಲ್ಲಿ ೨೧೦ ಇಂಚು ಮಳೆಬೀಳುವ ಪ್ರದೇಶದಲ್ಲಿ ಹುಟ್ಟಿ ಅಲ್ಲಿಂದ ಇದರ ವಿರುದ್ಧ ದಿಕ್ಕಿನಲ್ಲಿ ಬೆಳಗಾವಿನ ಖಾನಾಪುರ ತಾಲ್ಲೂಕಿನಲ್ಲಿ ಹರಿದು ಗೋವದಲ್ಲಿ ಮುಂದುವರಿದು ಅರಬ್ಬಿ ಸಮುದ್ರದಲ್ಲಿ ಕೂಡುತ್ತದೆ. ಈ ಮಹಾದಾಯಿ ನದಿಯ ಒಂದು ಹನಿ ನೀರನ್ನು ಆ ಕಡೆ ಜನ ಉಪಯೋಗಿಸಿಲ್ಲ, ಅದು ಸಮುದ್ರದಲ್ಲಿ ಬಿದ್ದು ವ್ಯರ್ಥವಾಗುತ್ತದೆ. ಗಂಗಾನದಿಯನ್ನು ಕಾವೇರಿಗೆ

ಕೂಡಿಸಿ ಆ ಪ್ರದೇಶದಲ್ಲಿ ನೀರಾವರಿ ಅಭಿವೃದ್ಧಿ ಮಾಡುವಂತ ಸಂದರ್ಭದಲ್ಲಿ ನಮ್ಮ ರಾಜ್ಯದೊಳಗೆ ಖಾನಾಪುರಕ್ಕೆ ೬ ಮೈಲು ಅಂತರದಲ್ಲಿರುವ ಮಹದಾಯಿ ನೀರನ್ನು ಮಲಪ್ರಭಾಕ್ಕೆ ಕೂಡಿಸಿದರೆ ಅದರ ಸಾಮರ್ಥ್ಯ ಹೆಚ್ಚಾಗುತ್ತದೆ. ಗುಲಬರ್ಗಾ, ಬಿಜಾಪುರ ಜಿಲ್ಲೆಗಳಲ್ಲಿ ನೀರಾವರಿಯನ್ನು ವಿಸ್ತಾರ ಮಾಡಲಿಕ್ಕೆ ಅನೂಕೂಲವಾಗುತ್ತದೆ. ನಮ್ಮ ಮಾನ್ಯ ಸಚಿವ ಅರಸರು ರಾಜ್ಯ ಸಂಪುಟದಲ್ಲಿ ಸಾಕಷ್ಟು ಹಣವನ್ನು ನೀರಾವರಿಗೆ ಅವಕಾಶ ಕೊಟ್ಟಿದ್ದಾಗಿದೆ. ಹಿಂದಿನ ಹದಿನಾರು ವರ್ಷಗಳ ಅವಧಿಯಲ್ಲಿ ೨೨೭ ಕೋಟಿ ರೂಪಾಯಿ ಇತ್ತು. ನೀರಾವರಿ ಭೂಮಿಯಲ್ಲಿ ಹೂಡಿದ ಬಂಡವಾಳ ೪೭೮ ಕೋಟಿಯಲ್ಲಿ ೩೯೦ ಕೋಟಿ ಮಾತ್ರ ಭಾರಿ ನೀರಾವರಿಗೆ ಇಟ್ಟು ೩೮ ಕೋಟಿಯನ್ನು ಮಧ್ಯಮ ಮತ್ತು ಸಣ್ಣನೀರಾವರಿಗೆ ಇಟ್ಟಿದ್ದಾರೆ. ಅಧ್ಯಕ್ಷರ ಮೂಲಕ ಸರಕಾರಕ್ಕೆ ಮನವಿ ಮಾಡಿಕೊಳ್ಳುವುದು ಏನೆಂದರೆ, ಈ ಮಹಾದಾಯಿ ನೀರು ವ್ಯರ್ಥವಾಗಿ ಸಮುದ್ರವನ್ನು ಕೂಡಿ ಉಪ್ಪಾಗುವುದನ್ನು ತಪ್ಪಿಸಿ, ಮಲಪ್ರಭಾಕ್ಕೆ ಕೂಡಿಸಬೇಕು ಎಂದು ಅನೇಕ ತಾಂತ್ರಿಕ ತಜ್ಞರು ಸಮೀಕ್ಷೆ ಮಾಡಿದ್ದಾರೆ. ಈ ಮಹಾದಾಯಿ ನದಿ ಬೆಳಗಾಂನಲ್ಲಿ ೩೧ ಮೈಲಿ ಹರಿದು,೨೫ ಮೈಲಿ ಗೋವಾದಲ್ಲಿ ಹರಿಯುತ್ತದೆ. ೧೨ ಟಿ.ಎಂ.ಸಿ.ಎಫ್.ಟಿ.ವಾಟರ್ ಬರುತ್ತದೆ. ತಜ್ಞರ ಅಭಿಪ್ರಾಯದ ಹಾಗೆ ೧ ಲಕ್ಷ೨೦ ಸಾವಿರ ಎಕರೆ ಕ್ಷೇತ್ರ ಹೆಚ್ಚಿಗೆ ವಿಸ್ತರಣೆ ಮಾಡಲಿಕ್ಕೆ ಬರುತ್ತದೆ.

ನಮ್ಮ ಬಾದಾಮಿ ತಾಲ್ಲೂಕಿನಲ್ಲಿ ಮಲಪ್ರಭಾ ನದಿ ಹರಿದರೂ ಸಹ ಸಾಕಷ್ಟು ಎಕರೆ ನೀರಾವರಿಯಾಗಿಲ್ಲ. ಕಾಲುವೆಗಳ ಮೂಲಕ ನೀರನ್ನು ಹರಿಸಿ ಲಿಫ್ಟ್ ಇರಿಗೇಷನ್‌ಗೆ ಅನುಕೂಲ ಮಾಡಿದರೆ ಅಲ್ಲಿನ ಕೆಂಪು ಭೂಮಿಗೆ ಅನುಕೂಲವಾಗುತ್ತದೆ. ಗುಲ್ಬರ್ಗ ಜಿಲ್ಲೆ. ಹುನುಗುಂದ ತಾಲ್ಲೂಕಿನಲ್ಲಿ ಏತದ ನೀರಾವರಿಯನ್ನು ಕೋಟ್ಟರೆ ಸುಮಾರು ೫೦ಸಾವಿರ ಎಕರೆ ಮೇಲ್ಪಟ್ಟು ನೀರಾವರಿ ಆಗುತ್ತದೆ. ಇಂಥ ನೀರಾವರಿಯನ್ನು ನಮ್ಮ ಸರ್ಕಾರದವರು ಕೈಗೊಳ್ಳಲು ಸೂಕ್ತ ಕ್ರಮ ತೆಗೆದುಕೊಳ್ಳಬೇಕು. ನಾಳೆ ಮಹಾಜನ ವರದಿಯ ನಂತರ ಯಾವ ಭಾಗ ಎಲ್ಲಿ ಉಳಿಯುತ್ತದೆಯೋ ಗೊತ್ತಿಲ್ಲ. ಇದನ್ನು ಮಾನ್ಯ ಮುಖ್ಯ ಮಂತ್ರಿಗಳು ಕೂಲಂಕುಷವಾಗಿ ಅಭ್ಯಾಸ ಮಾಡಿ, ರಾಜ್ಯಕ್ಕೆ ಇದು ಮಹತ್ವವಾದಂಥ ಹಾಗು ಪ್ರಧಾನವಾದಂಥಹ ಪ್ರಾಜಕ್ಟ್ ಆಗಿ ಮಾಡಿ ಕೊಡಬೇಕು ಹಾಗೆಯೆ ಮದಾಯಿ ನದಿ. ನಮ್ಮ ಖಾನಾಪುರದ ಹತ್ತಿರ ೮೦೦ಅಡಿಗಳ ಕೆಳಗೆ ಕೊಳದಲ್ಲಿ ಹರಿದು ಬರುತ್ತದೆ. ಇಲ್ಲಿ ಎಲೆಕ್ಟ್ರಿಸಿಟಿಯನ್ನು ಉತ್ಪತ್ತಿ ಮಾಡಲು ಅನುಕೂಲವಿದೆ. ಇದರಿಂದ ಅನೇಕ ರಾಜ್ಯಗಳಿಗೆ ನಾವು ವಿದ್ಯುಚ್ಛಕ್ತಿಯನ್ನು ಕೊಡಲು ಅನುಕೂಲವಾಗುತ್ತದೆ. ಈ ಎರಡು ಮಹತ್ತರ ಯೋಜನೆಗಳನ್ನು ಸರ್ಕಾರದವರು ಮಾಡಿಕೊಡಬೇಕು. ಎಂದು ತಮ್ಮ ಮುಖಾಂತರ ಸರ್ಕಾರಕ್ಕೆ ಪ್ರಾರ್ಥಿಸಿಕೊಂಡು ಇಷ್ಟು ಮಾತನಾಡಲಿಕ್ಕೆ ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಕರ್ನಾಟಕ ವಿಧಾನಸಭೆ

**ಸೋಮವಾರ 16.06.2001 ವಿಧಾನಸಭೆಯ ಸಭಾಂಗಣದಲ್ಲಿ ಬೆಳಗ್ಗೆ 11 ಗಂಟೆಗೆ ಸಮಾವೇಶಗೊಂಡ ಸಂತಾಪ ಸೂಚಕ ಸಭೆ**

**ಸಭೆಯ ಅಧ್ಯಕ್ಷತೆಯನ್ನು ಶ್ರೀ ಎಂ.ವಿ.ವೆಂಕಟಪ್ಪ ಅವರು ವಹಿಸಿದ್ದರು.**

### ಸಂತಾಪ ಸೂಚನೆ

### ಶ್ರೀ ಬಿ.ಎಂ.ಹೊರಕೇರಿ

ವಿಧಾನ ಸಭೆಯ ಮಾಜಿ ಸದಸ್ಯರಾಗಿದ್ದ ಶ್ರೀ ಬಿ.ಎಂ.ಹೊರಕೇರಿ ಅವರು ಜಾನಪದ ಸಾಹಿತಿಯಾಗಿದ್ದರು. ತಾಲ್ಲೂಕು ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿ, ವಿವಿಧ ಸಂಘ ಸಂಸ್ಥೆಗಳ ಅಧ್ಯಕ್ಷರಾಗಿಯೂ ಅಪಾರ ಸೇವೆ ಸಲ್ಲಿಸಿದ್ದ ಶ್ರೀಯುತರು 1962ರಲ್ಲಿ ಸಮಾಜ ಸೇವಾ ಪ್ರಶಸ್ತಿ ಪಡೆದಿದ್ದರು. 1975ರಲ್ಲಿ ನಡೆದ ಉಪ ಚುನಾವಣೆಯಲ್ಲಿ ಗುಳೇದಗುಡ್ಡ ಕ್ಷೇತ್ರದಿಂದ ಆಯ್ಕೆಯಾಗಿ ಸೇವೆ ಸಲ್ಲಿಸಿದ್ದರು.

ಶ್ರೀಯುತರು ದಿನಾಂಕ: 6ನೇ ಮೇ, 2001ರಂದು ನಿಧನ ಹೊಂದಿದರು.

## ಶ್ರೀ ಜಗದೀಶ ಶೆಟ್ಟರ್, ವಿರೋಧ ಪಕ್ಷದ ನಾಯಕರು

ತಾವು ತಂದಿರುವ ಸಂತಾಪ ಸೂಚನಾ ಗೊತ್ತುವಳಿಗೆ ನನ್ನ ಬೆಂಬಲ ಸೂಚಿಸುತ್ತಾ **ಶ್ರೀ ಬಿ.ಎಂ.ಹೊರಕೇರಿ**ಯುವರು 1975ರಲ್ಲಿ ಪ್ರಥಮವಾಗಿ ಗುಳೇದಗುಡ್ಡ ಉಪ ಚುನಾವಣೆಯಲ್ಲಿ ಅರಿಸಿ ಬಂದರು. ಅವರು ಒಂದು ಸಲ ಶಾಸಕರಾಗಿದ್ದರೂ ಕೂಡ. ಸಹಕಾರ ಕ್ಷೇತ್ರದಲ್ಲಿ ಹಾಗೂ ಸ್ಥಳೀಯ ಸಂಸ್ಥೆಗಳಲ್ಲಿ ಅವರು ಮಾಡಿರುವ ಕೆಲಸ ಬಹಳ ಶ್ಲಾಘನೀಯವಾದುದು. ಮಲಪ್ರಭ ಹಾಗೂ ಮಹಾದಾಯಿ ನದಿ ಜೋಡಣೆಯಾಗಬೇಕು ಆ ಮೂಲಕ ಆ ಭಾಗದಲ್ಲಿ ಬರುವ ಬಾಗಲಕೋಟೆ, ಧಾರವಾಡ, ನವಲಗುಂದ, ಗದಗ ಈ ಭಾಗಗಳಲ್ಲಿ ನೀರಾವರಿ ಮತ್ತು ಕುಡಿಯುವ ನೀರಿನ ವ್ಯವಸ್ಥೆಗೆ ಹೆಚ್ಚು ಒತ್ತು ಕೊಡುವ ಈ ಯೋಜನೆ ಆಗಬೇಕು ಎಂದು ಯಾರಾದರೂ ಮೊದಲು ಕೂಗು ಎಬ್ಬಿಸಿದ್ದರೆ ಅದು ಶ್ರೀ ಹೊರಕೇರಿಯುವರದ್ದು. ಇದಕ್ಕಾಗಿ ಅವರು ಸಾಕಷ್ಟು ಚಳುವಳಿ ಮಾಡಿದ್ದರು. ಇದರ ಬಗ್ಗೆ ಶ್ರೀಯುತರಿಗೆ ಎಷ್ಟು ಕಾಳಜಿ ಇತ್ತೆಂದರೆ ಬಹುಶಃ ಅವರಿಗೆ 80 ವರ್ಷ ದಾಟಿದ್ದರೂ ಅವರೇ ಖುದ್ದಾಗಿ ನಮ್ಮ ಮನೆಗೆ ಬಂದು. 'ನೋಡಿ ಜಗದೀಶ್ ಶೆಟ್ಟರವರೆ ಈ ವಿಷಯ ನೀವು ಮರೆಯಬೇಡಿ. ನಿಮಗೆ ಬೇಕಾದ ಎಷ್ಟೋ ಮಾಹಿತಿಯನ್ನು ನಾನು ಕೊಡಲಿಕ್ಕೆ ತಯಾರು ಇದ್ದೇನೆ. ಇದರ ಬಗ್ಗೆ ಹೆಚ್ಚು ಒತ್ತು ಕೊಟ್ಟು ಈ ಜೋಡಣೆ ಕಾರ್ಯ ಆಗಬೇಕು' ಎಂದು ಬಹಳ ಸಾರಿ ಒತ್ತಾಯ ಮಾಡಿದ್ದರು. ಅಂದರೆ ಅವರು ಯಾವುದೇ ವಿಷಯಕ್ಕೂ ಕೂಡ ಒಂದು ರೀತಿ ಕಮಿಟ್‌ಮೆಂಟ್ ಮಾಡಿಕೊಳ್ಳುತ್ತಿದ್ದರು. ಅವರು 1975ರಲ್ಲಿ ಶಾಸಕರಾಗಿದ್ದರು. ಇವತ್ತು ಶ್ರೀಯುತರಿಗೆ ನಾವು ಏನಾದರೂ ಶಾಂತಿ ಕೋರುವುದಾದರೆ, ಈ ಮಲಪ್ರಭಾ-ಮಹಾದಾಯಿ ಈ ಎರಡು ನದಿಗಳ ಜೋಡಣೆಯ ಕಾರ್ಯ ಏನು ಇದೆ ಇದಕ್ಕೆ ಹೆಚ್ಚು ಒತ್ತು ಕೊಟ್ಟು ಅನುಷ್ಠಾನಕ್ಕೆ ತಂದರೆ ಶ್ರೀಯುತರ ಆತ್ಮಕ್ಕೆ ಶಾಂತಿಯನ್ನು ಕೋರಿದ ಹಾಗೆ ಆಗುತ್ತದೆ ಎನ್ನುವ ಮಾತನ್ನು ಈ ಸಂದರ್ಭದಲ್ಲಿ ಹೇಳುತ್ತೇನೆ.

# ಜೀವನದ ಮುಖ್ಯ ಘಟನಾವಳಿಗಳು

1. 1916–ಮೇ, 31 ಜನನ, ಢಾಣಕಶಿರೂರ ತಾ|| ಬಾದಾಮಿ ಜಿ|| ಬಾಗಲಕೋಟೆ
2. 1932–ಮುಲ್ಕಿ ಪರೀಕ್ಷೆ, ರೋಣ
3. 1936–ಮ್ಯಾಟ್ರಿಕ್, ಪಿಡಿಜೆ ಹೈಸ್ಕೂಲ, ವಿಜಾಪುರ
4. 1938–ಫೈ.ಆಯ್.ಸಾಯನ್ಸ್, ಕರ್ನಾಟಕ ಕಾಲೇಜ್, ಧಾರವಾಡ
5. 1940–ಕೃಷಿ ತರಬೇತಿ, ದೇವಿಹೊಸೂರು
6. 1941–ಗ್ರಾಮ ಸಹಾಯಕ, ಮುಂಬೈ ಸರಕಾರ
7. 1942–ಫೀಲ್ಡ್ ಕಾಮಗಾರ್ ಮುಂಬೈ ಸರಕಾರ
8. 1943–ಕೃಷಿ ಸಹಾಯಕ ಮುಂಬೈ ಸರಕಾರ
9. 1955–ಕೆಲಸಕ್ಕೆ ರಾಜೀನಾಮೆ, ಶಿವಯೋಗ ಮಂದಿರದ ಜಮೀನುಗಳಲ್ಲಿ ಲಾವಣಿ ಆಧಾರದ ಮೇಲೆ ಸಾಗುವಳಿ, ಸಾರ್ವಜನಿಕ ಸೇವೆ ಪ್ರವೇಶ.
10. 1960–ಬಾದಾಮಿ ತಾಲೂಕಾ ಅಭಿವೃದ್ಧಿ ಮಂಡಳಿಗೆ ಆಯ್ಕೆ. ಅದರ ಪ್ರಥಮ ಅಧ್ಯಕ್ಷ. ಒಟ್ಟು 14 ವರ್ಷಗಳ ಅಧ್ಯಕ್ಷತೆ.
11. 1963–ಫಾರ್ಮರ್ಸ್ ಎಕ್ಸ್‌ಚೇಂಜ್ ಪ್ರೋಗ್ರಾಮ್ ಅನ್ವಯ ಭಾರತದಿಂದ ಜರ್ಮನಿಗೆ ಪ್ರವಾಸ. ಭಾರತದ ಹತ್ತು ಜನರಲ್ಲಿ ಕರ್ನಾಟಕದ ಏಕೈಕ ಪ್ರತಿನಿಧಿಯಾಗಿ ವಿದೇಶ ಪ್ರವಾಸ.
12. 1964–ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ–ನಾಲ್ವರಿಗೆ (ಟಿ.ಎಂ.ಎ.ಪೈ, ರಾ.ಯ.ಧಾರವಾಡಕರ, ಡಾ.ಬಿ.ಎಸ್.ಜೀರಿಗೆ, ಬಿ.ಎಂ.ಹೊಕೇರಿ)
13. 1975– ಗುಳೇದಗುಡ್ಡ ಮತಕ್ಷೇತ್ರದಿಂದ ಉಪಚುನಾವಣೆಯಲ್ಲಿ ಕರ್ನಾಟಕ ವಿಧಾನಸಭೆಗೆ ಆಯ್ಕೆ.
14. 1976–ವಿಧಾನ ಸಭೆಯಲ್ಲಿ ಮೊದಲ ಬಾರಿಗೆ ಮಲಪ್ರಭಾ–ಮಹಾದಾಯಿ ನದಿ ಜೋಡಣೆಯ ಅಗತ್ಯ–ಮಹತ್ವ–ಪ್ರಯೋಜನ ಕುರಿತು ಸರಕಾರದ ಗಮನ ಸೆಳೆದ ಪ್ರಬುದ್ಧ ಭಾಷಣ.
15. 1978–ದೆಹಲಿಯಲ್ಲಿ 40 ರಾಷ್ಟ್ರಗಳು ಭಾಗವಹಿಸಿದ್ದ ಇಂಟರ್‌ನ್ಯಾಷನಲ್ ಎಕ್ಸ್‌ಪ್ಲೋರೆಜನ್ ಆಫ್ ರೂರಲ್ ಡೆವಲಪ್‌ಮೆಂಟ್ ಕಮ್ಮಿಟಿದಲ್ಲಿ ಭಾಗವಹಿಸಿ 'ನದಿ ದಿಕ್ಕು ಬದಲಾವಣೆ–ಸಾಧನೆ' ಕುರಿತು ಪ್ರಬಂಧ ಮಂಡಣೆ.
16. 1987–ಬರಗಾಲದ ನಿಮಿತ್ತ ಕರ್ನಾಟಕಕ್ಕೆ ಬಂದಿದ್ದ (ಮುತ್ತಲಗೇರಿ ಗ್ರಾಮಕ್ಕೆ) ಆಗಿನ ಪ್ರಧಾನಿ ದಿ.ರಾಜೀವ ಗಾಂಧಿಯವರನ್ನು ಭೆಟ್ಟಿಯಾಗಿ ಪ್ರತ್ಯೇಕ ಮನವಿ ಮತ್ತು ಮಲಪ್ರಭಾ–ಮಹಾದಾಯಿ ನದಿ ಜೋಡಣೆ ಪ್ರಯೋಜನದ ವಿವರಣೆ.
17. 2001 ಮೇ 6 ರಂದು ನಿಧನ.

## ಕೃಷಿಯಲ್ಲಿ ಖುಷಿ ಕಂಡ ಕಾಯಕಯೋಗಿ

### ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು!

ಈ ಮಾತಿಗೆ ನಿದರ್ಶನವಾಗಿ ನಿಂತವರು ಬಾದಾಮಿಯ ಬಿ.ಎಂ.ಹೊರಕೇರಿಯವರು. ಈ ದೇಶದ ಉದ್ಧಾರ ಕೃಷಿಕ್ಷೇತ್ರದ ಪ್ರಗತಿಯೊಂದಿಗೆ ಸಮ್ಮಿಳಿತವಾಗಿದೆ ಎಂಬ ಗಾಂಧೀಜಿಯವರ ಮಾತಿನಲ್ಲಿ ಅವರಿಗೆ ನೂರಕ್ಕೆ ನೂರರಷ್ಟು ನಂಬಿಕೆ. ಇವರು ಅಪ್ಪಟ ಗಾಂಧೀವಾದಿ.

ಹೊರಕೇರಿಯವರ ವೇಷ, ನಡೆ, ನುಡಿ ಎಲ್ಲ ಸರಳ. ನೇರ ದಾರಿಯಲ್ಲಿ ಕಂಡವರೊಂದಿಗೆಯೂ ಆತ್ಮೀಯ ಮಾತು. ಅವರಿಗೀಗ 74 ವರ್ಷ. ಆದರೆ ಇಪ್ಪತ್ತರ ಉತ್ಸಾಹ. ಬೇರೆ ವಿಷಯದೊಂದಿಗೆ ಮಾತು ಪ್ರಾರಂಭವಾದರೂ ಅದು ಮುಗಿಯುವುದು ಒಕ್ಕಲುತನದ ವಿಚಾರದಲ್ಲಿಯೇ, ಕೃಷಿ ಕ್ಷೇತ್ರವನ್ನು ಕಾಯಾ ವಾಚಾ ಮನಸಾ ಹಚ್ಚಿಕೊಂಡವರು ಇವರು. ಅಷ್ಟೊಂದು ಉತ್ಕಟ ಪ್ರೀತಿ !

ಹಿಂದೊಮ್ಮೆ ಕೃಷಿ ಸಹಾಯಕರಾಗಿ ಸರ್ಕಾರದ ಚಾಕರಿ ಮಾಡಿದ ಈ ಹಿರಿಯರು 1971ರಿಂದಲೂ ಕರ್ನಾಟಕ ರಾಜ್ಯದ ಕೃಷಿ ಸಹಾಯಕ ಸಂಘದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದು ಇವರ ಕಾರ್ಯ ವೈಖರಿಗೆ ಹಾಗೂ ಕೃಷಿ ಸಹಾಯಕ ಸಮುದಾಯದಲ್ಲಿ ಅವರಿಗಿರುವ ಜನಪ್ರಿಯತೆಗೆ ಸಾಕ್ಷಿ. ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದ ಕೃಷಿ ಚಟುವಟಿಕೆಗಳಲ್ಲಿ ಪಾಲ್ಗೊಂಡ ಅಪಾರ ಅನುಭವ ಇವರಿಗಿದೆ.

ಸಮಾಜ ಸೇವೆ, ಸಾಹಿತ್ಯ ಸೇವೆಗಳಲ್ಲೂ ತಮ್ಮನ್ನು ತೊಡಗಿಸಿಕೊಂಡ ಹೊರಕೇರಿಯವರು ಜನರ ಆಗ್ರಹದ ಮೇರೆಗೆ ವಿಧಾನಸಭೆಯ ಚುನಾವಣೆಯಲ್ಲಿ ಒಮ್ಮೆ ಸ್ಪರ್ಧಿಸಿ ಶಾಸಕರೂ ಆಗಿದ್ದರು. ರಾಜಕೀಯ ಕ್ಷೇತ್ರದಲ್ಲಿ ಕೆಲಸ ಮಾಡಿದ್ದರೂ 'ರಾಜಕೀಯ' ಮಾಡಿದವರಲ್ಲ.!

**ಬೆಳೆದು ಬಂದ ದಾರಿ:**

ಬಸಪ್ಪ ಮಹಾದೇವಪ್ಪ ಹೊರಕೇರಿಯವರು ಜನಿಸಿದ್ದು ವಿಜಾಪುರ ಜಿಲ್ಲೆಯ ಬಾದಾಮಿ ತಾಲ್ಲೂಕಿನ ಢಾಣಕಶಿರೂರು ಗ್ರಾಮದಲ್ಲಿ. ಕೃಷಿ ಕುಟುಂಬದಲ್ಲಿ ಹುಟ್ಟಿ ಬೆಳೆದ ಹೊರಕೇರಿ ಯವರು ಸ್ವಾಭಾವಿಕವಾಗಿ ಬಾಲ್ಯದಿಂದಲೂ ಒಕ್ಕಲುತನದ ಬಗ್ಗೆ ಆಸಕ್ತಿ. ವಿದ್ಯಾಭ್ಯಾಸ ನಂತರ ಒಂದು ವರ್ಷದ ಕೃಷಿ ತರಬೇತಿ ಪಡೆದರು.

ಹನ್ನೇರಡು ವರ್ಷ ಕೃಷಿ ಸಹಾಯಕರಾಗಿ ಸೇವೆ ಸಲ್ಲಿಸಿದರೂ ತೃಪ್ತಿಯಾಗಲಿಲ್ಲ. ಕೃಷಿಯಲ್ಲಿ ಪ್ರಾಯೋಗಿಕವಾಗಿ ಸಂಪೂರ್ಣವಾಗಿ ತೊಡಗಿಕೊಳ್ಳುವ ಉದ್ದೇಶದಿಂದ ಇವರು ಸರಕಾರಿ ಸೇವೆಗೆ ರಾಜಿನಾಮೆ ಇತ್ತು ಹೊರ ಬಂದರು.

ಸಾಂಪ್ರದಾಯಿಕ ಒಕ್ಕಲುತನಕ್ಕೆ ನೂತನ ವೈಜ್ಞಾನಿಕ ಪದ್ಧತಿಯನ್ನು ಅಳವಡಿಸುವದರಿಂದ ಹೆಚ್ಚು ಲಾಭಕರ ಎಂಬುದನ್ನು ಮನಗಂಡ ಹೊರಕೇರಿಯವರು ಹೊಸ ಹೊಸ ಪದ್ಧತಿಗಳನ್ನು ಪ್ರಯೋಗ ಮಾಡಿ ನೋಡಿದರು. ಫಲಿತಾಂಶದಲ್ಲಿ ತೃಪ್ತಿ ಕಂಡಾಗ ಜೊತೆಯವರಿಗೂ ಅದರ ಮಹತ್ವ ಕುರಿತು ಹೇಳಿದರು. ಗ್ರಾಮೀಣ ಕೃಷಿಕರನ್ನು ಸಂಶೋಧನಾ ಕೇಂದ್ರಗಳಿಗೆ ಕರೆದುಕೊಂಡು ಹೋಗಿ ಹೊಸ ವಿಧಾನಗಳ ಪರಿಚಯ ಮಾಡಿಸಿದ ಹಿರಿಮೆ ಇವರದು. ಸುತ್ತಲಿನ ರೈತರಿಗೆ ಇವರ ಸಲಹೆ-ಮಾರ್ಗದರ್ಶನ ಹೆಚ್ಚಿನ ಸ್ಫೂರ್ತಿ ತಂದಿತು. ರೈತ ಸಮುದಾಯಕ್ಕೆ ಮಾದರಿಯಾಗಿ ಹೊರಕೇರಿ ರೂಪುಗೊಳ್ಳುವಲ್ಲಿ ವಿಳಂಬವಾಗಲಿಲ್ಲ.

ಕೃಷಿಕರ ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಯ ಸುಧಾರಣೆ ಅಗತ್ಯವೆಂಬುದನ್ನು ಮನಗಂಡ ಇವರು ಬಾದಾಮಿ ತಾಲ್ಲೂಕಿನಲ್ಲಿ ಅನೇಕ ಸಹಕಾರ ಸಂಘಗಳನ್ನು ಸ್ಥಾಪಿಸಿದರು. 'ಹಳ್ಳಿಯಿಂದ ದಿಲ್ಲಿಗೆ' ಎಂಬಂತೆ ಜಿಲ್ಲೆಯಲ್ಲಿ ಕೃಷಿ ಸಹಕಾರ ಸಂಘದ ಅಧ್ಯಕ್ಷರಾದ ಹೊರಕೇರಿಯವರು ರಾಜ್ಯದ ವ್ಯವಸಾಯ ಸಹಕಾರಿ ಸಂಘದ ಅಧ್ಯಕ್ಷರಾಗಿ ಆರು ವರ್ಷ ಸೇವೆಸಲ್ಲಿಸಿದರು. ರಾಷ್ಟ್ರೀಯ ಬೀಜ ಅಭಿವೃದ್ಧಿ ಮಂಡಲಿಯ ಸದಸ್ಯರಾಗಿದ್ದರು. ಹೊಸದಿಲ್ಲಿಯ ಅಖಿಲ ಭಾರತ ಕೃಷಿಕ ಸಮಾಜದಲ್ಲಿ ಕರ್ನಾಟಕವನ್ನು ಹದಿನೈದು ವರ್ಷಗಳ ಕಾಲ ಪ್ರತಿನಿಧಿಸಿದ ಕೀರ್ತಿ ಇವರದು.

1964ರಲ್ಲಿ ಭಾರತ ಸರಕಾರದ ವತಿಯಿಂದ ಜರ್ಮನಿಗೆ ಭೇಟ್ಟಿ ಕೊಟ್ಟಿದ್ದರು. ಅಲ್ಲಿನ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಗಳನ್ನು ಅಭ್ಯಾಸ ಮಾಡಿ, ಸರಕಾರಕ್ಕೆ ವರದಿ ಒಪ್ಪಿಸಿದ್ದರು.

1982ರಲ್ಲಿ ಗ್ರಾಮೀಣ ಜನತೆ ಹಾಗೂ ಅಭಿವೃದ್ಧಿ ವಿಷಯದ ಕುರಿತು ನಡೆದ ಅಂತಾರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಪಾಲ್ಗೊಂಡು ತಮ್ಮ ಅಭಿಪ್ರಾಯಗಳನ್ನು ಎಲ್ಲರ ಮನ ಮುಟ್ಟುವಂತೆ ಮಂಡಿಸಿದರು.

**ಸಾಹಿತ್ಯ ಚಟುವಟಿಕೆ :**

ಆಕಾಶವಾಣಿ ಹಾಗೂ ದೂರದರ್ಶನಗಳಲ್ಲಿ 'ಗ್ರಾಮೀಣಸಲಹಾ ಮಂಡಳಿ'ಯ ಸದಸ್ಯರಾಗಿ ಸುಮಾರು ಒಂದು ದಶಕ ಸೇವೆಸಲ್ಲಿಸಿದರು. ಆಕಾಶವಾಣಿ 'ಕೃಷಿರಂಗ' ಕಾರ್ಯಕ್ರಮದಲ್ಲಿ ಕಳೆದ ಇಪ್ಪತ್ತು ವರ್ಷಗಳಿಂದ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಜನಸಾಮಾನ್ಯರ ಆಡು ಭಾಷೆಯಲ್ಲಿ ಜನಪ್ರಿಯವಾದ ಕೃಷಿಸಾಹಿತ್ಯ ರಚಿಸಿದ್ದಾರೆ. ಇಪ್ಪತ್ತು ವರ್ಷಗಳ ಹಿಂದೆ ಪ್ರಕಟವಾದ ಇವರ 'ಬೇಸಿಗೆಯಲ್ಲಿ ಭೂಮಿಗೂ ಬೇಕು ವಿಶ್ರಾಂತಿ' ಲೇಖನ ಇಂದಿಗೂ ಜನಪ್ರಿಯವಾಗಿದೆ. ವೈಜ್ಞಾನಿಕ ಕೃಷಿಯನ್ನು ಆಡುಮಾತಿನಲ್ಲಿ ಸೊಗಸಾಗಿ ವಿವರಿಸಿ ಬರೆಯುವ ಹೊರಕೇರಿಯವರ ಸಾಹಿತ್ಯದ ಮೂಲಕವೂ ಕೃಷಿ ಸೇವೆ ಮಾಡಿದ್ದಾರೆ.

'ಜನಪದ ಸಾಹಿತ್ಯ' ಹಾಗೂ 'ಸಂಯೋಜಕ ಸರ್ವಜ್ಞ' ಎಂಬ ಪುಸ್ತಕಗಳನ್ನು ಪ್ರಕಾಶನ ಮಾಡಿದ ಹೊರಕೇರಿಯವರಿಗೆ ಗ್ರಾಮೀಣ ಜನತೆಯ ಹಾಡುಗಳು, ನುಡಿಮುತ್ತುಗಳು ಹಾಗೂ ಚಟುವಟಿಕೆಗಳ ಬಗ್ಗೆ ತುಂಬ ಆಸಕ್ತಿ. ಇವೆಲ್ಲವನ್ನೂ 'ಸರ್ವಗಾನ ಮತ್ತು ಯೋಜನೆ' ಎಂಬ ಪುಸ್ತಕದಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ.

**ಹಲವು ಯೋಜನೆಗಳು :**

ಹೊರಕೇರಿಯವರು ಕನಸುಗಾರರು. ಆದರೆ ಉಳಿದವರಂತೆ ಬರೀ ಕನಸುಗಳನ್ನು ಹೆಣೆಯುತ್ತ ಕೂಡುವುದು ಅವರಿಗೆ ಇಷ್ಟವಿಲ್ಲ. ಅವುಗಳಿಗೆ ಯೋಜನೆಯ ಹೊಳಪು ಹಾಕಿ, ಫಲಾಫಲಗಳ ವಿವೇಚನೆ ಮಾಡಿ ವಿವರಿಸುವ ಸಾಮರ್ಥ್ಯ ಅವರಿಗಿದೆ.

ಮಲಪ್ರಭಾ ನದಿಯ ಪ್ರವಾಹದಿಂದ ಧಾಣಕಶಿರೂರು ಗ್ರಾಮದ ಸುತ್ತಮುತ್ತಲಿನ ಭೂಮಿ ಕೊಚ್ಚಿಕೊಂಡು ಹೋಗಿ ಅದರ ಫಲವತ್ತತೆ ಕಡಿಮೆಯಾಗುತ್ತಿತ್ತು. ಅರಣ್ಯ ಅಭಿವೃದ್ಧಿ ಮಂಡಲಿಯ ನೆರವಿನಿಂದ ಅಲ್ಲಿ ಅರಣ್ಯ ಬೆಳೆಸಿ ಮಣ್ಣಿನ ಕೊರತೆ ತಡೆಗಟ್ಟುವಲ್ಲಿ ಅವರ ಪಾತ್ರ ಮುಖ್ಯವಾಗಿತ್ತು.

ಶಿವಯೋಗ ಮಂದಿರದ ಬಳಿ ಮಲಪ್ರಭಾ ನದಿಯ ನೀರಿನ ನೆರವಿನಿಂದ ವಿದ್ಯುತ್ ಉತ್ಪಾದನಾ ಘಟಕದ ಸ್ಥಾಪನೆ ಇವರ ಬಹುದಿನದ ಕನಸು. ಈ ಯೋಜನೆಯಿಂದ ಸುಮಾರು ಮೂರು ಮಿಲಿಯನ್ ವ್ಯಾಟ್‌ಗಳಷ್ಟು ವಿದ್ಯುತ್ ಉತ್ಪಾದಿಸಬಹುದೆಂಬ ಇವರ ಯೋಜನೆಯ ವಿಚಾರ. ಈಗಾಗಲೇ ಸರಕಾರದ ಪರವಾಗಿ ಸರ್ವೆ ಮಾಡಿಸಲಾಗಿದೆಯಾದರೂ ಇದುವರೆಗೆ ಉತ್ತರ ಬಂದಿಲ್ಲ. ಈ ಯೋಜನೆಯ ಮಹತ್ವ ಅರಿತು ಸರಕಾರ ಶೀಘ್ರ ಮಂಜೂರಾತಿ ನೀಡಿದರೆ ವಿದ್ಯುತ್ ಕ್ಷಾಮಕೊಂಚ ತಗ್ಗಬಹುದಾಗಿದೆ.

ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನಲ್ಲಿ ಹುಟ್ಟಿ ಭಾನಾವರ ಸೇರಿ ಗೋವೆಯ ಬಳಿ ಅರಬ್ಬಿ ಸಮುದ್ರ ಸೇರುವ ಮಹಾದಾಯಿ ನದಿಯ ನೀರನ್ನು ಉಪಯೋಗಿಸುವ ಯೋಜನೆಯೊಂದನ್ನು ಹೊರಕೇರಿಯವರು ರಾಜ್ಯ ಸರಕಾರಕ್ಕೆ ಕೊಟ್ಟಿದ್ದಾರೆ. ಈ ಯೋಜನೆಯ ಪ್ರಕಾರ ಕೆಂಗಲ್ ಹತ್ತಿರ ಆಣೆಕಟ್ಟು ಕಟ್ಟಿ ಮಲಪ್ರಭಾ ನದಿಗೆ ನೀರು ತಿರುಗಿಸಿದರೆ ಸುಮಾರು 10.2 ಟಿ.ಎಂ.ಸಿ. ಅಡಿಗಳಷ್ಟು ನೀರನ್ನು ಹೆಚ್ಚಿಸಬಹುದಾಗಿದೆ.

ಪದೇ ಪದೇ ಬರಗಾಲಕ್ಕೆ ಈಡಾಗುವ ವಿಜಾಪುರ ಹಾಗೂ ಧಾರವಾಡ, ಬೆಳಗಾವಿ ಜಿಲ್ಲೆಯ ರೈತರಿಗೂ ಈ ಯೋಜನೆಯಿಂದ ಅಧಿಕ ಲಾಭವಾಗುತ್ತದೆ. ಅನಾವಶ್ಯಕವಾಗಿ ಹರಿದು ಹೋಗುವ ನೀರನ್ನು ಸದುಪಯೋಗ ಪಡಿಸಿಕೊಳ್ಳಲು ಸರಕಾರ ಶೀಘ್ರ ಕ್ರಮ ತೆಗೆದುಕೊಳ್ಳಬೇಕೆಂಬುದು ಹೊರಕೇರಿಯವರ ಆಪೇಕ್ಷೆ.

ಭಾವಶುದ್ಧಿ ಇರುವಲ್ಲಿ ಕಾರ್ಯ ಸಿದ್ಧಿಯೂ ಸಹಜ ಎಂಬ ಮಾತಿಗೆ ಬಿ.ಎಂ.ಹೊರಕೇರಿ ಯುವರು ನಿದರ್ಶನರಾಗಿದ್ದಾರೆ. ಗ್ರಾಮೀಣ ಜನತೆ ಹಾಗೂ ಸಮಾಜ ಕಲ್ಯಾಣದಲ್ಲಿ ಪ್ರಾಮಾಣಿಕ ಆಸಕ್ತಿಯಿಂದ ಶ್ರಮಿಸುವ ಇಂಥ ವ್ಯಕ್ತಿಗಳು ಈಗೀಗ ಅಪರೂಪ. ಕೃಷಿಯಿಂದಲೇ ದೇಶದ ಪ್ರಗತಿ, ಉದ್ಧಾರ ಸಾಧ್ಯ ಎಂಬುದು ಇವರ ಬಲವಾದ ನಂಬಿಕೆ. ಕೃಷಿ ಕ್ಷೇತ್ರದಲ್ಲಿ ಅಪಾರ ಅನುಭವ ಹಾಗೂ ಜ್ಞಾನ ಪಡೆದ ಇಂಥ ಹಿರಿಯರ ಮಾರ್ಗದರ್ಶನವನ್ನು ಕೃಷಿ ವಿಶ್ವವಿದ್ಯಾಲಯ ಪಡೆದುಕೊಳ್ಳಬೇಕು.

ಕೃಷಿಯಲ್ಲಿಯೇ ಖುಷಿ ಕಾಣುವ ಬಿ.ಎಂ.ಹೊಕೇರಿಯವರು ನಿಜಕ್ಕೂ ಓರ್ವ ಮಾದರಿ ಕೃಷಿಕರೆನಿಸಿದ್ದಾರೆ.

**ಗುರುರಾಜ ಹುಣಸಿಮರದ ವಿನಯ ಕುಲಕರ್ಣಿ**
(ಸಂಯುಕ್ತ ಕರ್ನಾಟಕ-ಸಾಪ್ತಾಹಿಕ ಸೌರಭ, ದಿ:21.07.1991)

## ಮರೆಯುವ ಮುನ್ನ

ಹೊರಕೇರಿ ಶಾಸಕರಾಗಿದ್ದರು, ಕೃಷಿಕರಾಗಿದ್ದರು, ಪ್ರಯೋಗಶೀಲರಾಗಿದ್ದರು ಮತ್ತು ಸಂಘಟನಾ ಚತುರರಾಗಿದ್ದರು. ಇವೆಲ್ಲದರಷ್ಟೇ ಮುಖ್ಯ, ಒಮ್ಮೆ ಶಾಸಕರಾದರೆ ಬೆಂಗಳೂರು ಸೇರಿಕೊಂಡು ಕೊನೆಯುಸಿರೆಳೆಯುವವರಂತಲ್ಲದೆ ಹೊರಕೇರಿಯುವರು ತಮ್ಮ ಊರಲ್ಲಿ ನಿಂತು ಎಲ್ಲರಿಗೆ ನೆರವಾಗುತ್ತಾ ಎಲ್ಲರೊಂದಿಗೆ ಬದುಕಿದರು. ಸ್ವಾತಂತ್ರ್ಯ ಸಂಗ್ರಾಮದಿಂದ ಹಿಡಿದು ಸ್ವಂತತ್ರ ಕರ್ನಾಟಕದ ಸರಕಾರ ಮತ್ತು ಜನಜೀವನದಲ್ಲಿ ಬೆರೆತ ಈ ವ್ಯಕ್ತಿ ಅರ್ಥಪೂರ್ಣದಿಂದ ಕೂಡಿದ ಬದುಕು ನಡೆಸಿದರು. ಶಾಸಕನ ಕೆಲಸ ಸಾಕೆನ್ನೆಸಿ ಗ್ರಾಮ ಜೀವನಕ್ಕೆ ತಮ್ಮನ್ನು ಅರ್ಪಿಸಿಕೊಂಡರು.

**ಪಿ.ಲಂಕೇಶ**
(ಲಂಕೇಶ ಪತ್ರಿಕೆ- ಮಾರ್ಚ್ 31, 1993)

# ಮೋಡದ ಮುಸುಕಿನಲ್ಲಿ 'ಮಿಂಚಿದ' ನಕ್ಷತ್ರ
# ಹೊರಕೇರಿ ಸಾಹೇಬರು:

ಬಾದಾಮಿಯ ಜನರು ಇವರನ್ನು ಕರೆಯುವುದು 'ಸಾಹೇಬ'ರೆಂದು. ಆದರೆ ಇವರ ಮೂಲವೃತ್ತಿ ಕೃಷಿ. ಮಾಜಿ ಶಾಸಕ ಬಿ.ಎಂ.ಹೊರಕೇರಿ ಬಾದಾಮಿಯ ಜನತೆಗಷ್ಟೇ ಅಲ್ಲ. ರಾಜ್ಯದ ಜನತೆಗೂ ಹಿಂದೆ ಶಾಸಕರಾಗಿ ಪರಿಚಿತರಾಗಿದ್ದರು. ಸಮಾಜ ಸೇವೆ, ಪರೋಪಕಾರ ಇವರ ನೆಚ್ಚಿನ ಹವ್ಯಾಸ. ಇವರು ಅರಿಯದ ವಿಷಯವಿಲ್ಲ. ಕೃಷಿ, ಸಾಹಿತ್ಯ, ವಿಜ್ಞಾನ ಹಾಗೂ ರಾಜಕೀಯ ರಂಗದಲ್ಲಿ ಇವರ ಸೇವೆ ಅಪಾರ.

ಕನ್ನಡ ಹಾಗೂ ವಚನ ಸಾಹಿತ್ಯದಲ್ಲಿ ಆಳವಾದ ಅಧ್ಯಯನ ಮಾಡಿರುವ ಹೊರಕೇರಿ, ಕೃತಿಗಳನ್ನು ರಚಿಸಿ, ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಗರತಿ ಗಂಗಮ್ಮನ ಉಡಿಯಾಗ, ಮಹಿಳೆ ಅಬಲೆಯಲ್ಲ ಸಬಲೆ ಹಾಗೂ ಜಾನಪದ ಸಂಹಿತ ಎಂಬ ಪುಸ್ತಕಗಳನ್ನು ಬರೆದಿದ್ದು ಅವು ಪ್ರಕಟಗೊಂಡಿವೆ.

**ಸಂಯುಕ್ತ ಕರ್ನಾಟಕ** ದಿ:22.06.1992

## ಬಿ.ಎಂ.ಹೊರಕೇರಿ, ಒಂದು ನೆನಪು

ನಮ್ಮ ಬದುಕು ಹೇಗಿರಬೇಕು ಅಂತಾ ಯೋಚಿಸಿದಾಗ ಕೆಲವರು ಒಂದು ಸುಂದರವಾದ ಮನೆ, ಮುಂದೆ ಗಾರ್ಡನ್, ಮನೆಯಲ್ಲಿ ಫ್ರಿಡ್ಜ್, ಫೋನ್, ಫ್ಯಾನ ಮುಂತಾದ ಅಲಂಕಾರಿಕ ವಸ್ತುಗಳಿರಬೇಕು. ಜೊತೆಗೆ ತಂದೆ-ತಾಯಿ ಬಿಟ್ಟು ಮಡದಿ ಮಕ್ಕಳಷ್ಟೇ ಇರಬೇಕೆಂದು ಯೋಚಿಸಿದರೆ, ಇನ್ನು ಕೆಲವರು ಮಡದಿ ಮಕ್ಕಳ ಹಾಳಾಗಿ ಹೋಗಲಿ, ತನಗೆ ಅಧಿಕಾರ ಬೇಕು, ಸದಾ ಗೂಟದ ಕಾರಿನಲ್ಲಿಯೇ ಮೆರೆಯಬೇಕು ಅಂತಿರ್ತಾರೆ. ಒಟ್ಟಾರೆ ಹಣ ಗಳಿಸಬೇಕು. ಸಾಕಷ್ಟು ಆಸ್ತಿ ಮಾಡಬೇಕು ಇನ್ನೂ ಏನೇನೋ ಕನಸನ್ನ ಕಟ್ಟಿಕೊಂಡಿರ್ತಾರೆ.

ಇವೆಲ್ಲವುಗಳನ್ನು ಬಿಟ್ಟು ಒಂದ್ಸಾರಿಯಾದ್ರೂ ಸಮಾಜ, ಸಂಘ, ಸಂಸ್ಥೆ, ದೀನ ದಲಿತರು, ಶೋಷಣೆಗೊಳಪಟ್ಟವರು, ನೊಂದವರು ನಿರ್ಗತಿಕರು

ಮುಂತಾದವರ ಬದುಕು ಹೇಗಿದೆ ಅನ್ನೋದನ್ನ ನೋಡುವುದೇ ಇಲ್ಲ. ಇದು ಇವರಿಗೆ ಬೇಕಾಗಿಯೂ ಇಲ್ಲ ಆದರೆ ದಿ.ಬಿ.ಎಂ.ಹೊರಕೇರಿಯವರು ಈ ಎಲ್ಲ ವರ್ಗದವರನ್ನು ಸ್ಪಂದಿಸಿದರು. ಸರ್ಕಾರದ ಸಹಾಯವನ್ನು ಅವರಿಗೆ ಒದಗಿಸಿ ಕೊಟ್ಟರು. ಬಾದಾಮಿಯಲ್ಲಿ ಬಹಳಷ್ಟು ಸಂಘ, ಸಂಸ್ಥೆ, ಬ್ಯಾಂಕ್ ಮುಂತಾದವುಗಳನ್ನು ಹುಟ್ಟು ಹಾಕಿದವರಲ್ಲಿ ಇವರೇ ಪ್ರಮುಖರೆಂದರೆ ತಪ್ಪಾಗಲಿಕ್ಕಿಲ್ಲ. ಇಂಥ ಓರ್ವ ಮಹಾನುಭಾವರನ್ನು ನಾವು ಸ್ಮರಿಸಬೇಕಾಗಿರುವುದು ಅತ್ಯವಶ್ಯಕ. ಈ ಕಾರಣದಿಂದಲೇ ನಾವು ನಮ್ಮ ಗ್ರಂಥಾಲಯಕ್ಕೆ ಬಿ.ಎಂ.ಹೊರಕೇರಿಯವರ ಹೆಸರನ್ನು ನಾಮಕರಣ ಮಾಡಿದ್ದೇವೆ.

ಹೊರಕೇರಿಯವರ ನಾಮವನ್ನಿರಿಸಿಕೊಂಡಿರುವ ಗ್ರಂಥಾಲಯಕ್ಕೆ ತನು, ಮನ, ಧನದಿಂದ ಸಹಾಯ ಸಹಕಾರ ನೀಡಿರಿ. ನಿಮ್ಮ ಮನೆಯಲ್ಲಿರುವ ಹಳೆಯ ಪುಸ್ತಕಗಳನ್ನು ದೇಣಿಗೆಯಾಗಿ ನೀಡಿ ಗ್ರಂಥಾಲಯವನ್ನು ಅಭಿವೃದ್ಧಿಗೊಳಿಸುವಲ್ಲಿ ಸ್ಪಂದಿಸಿರಿ. ಹೊರಕೇರಿಯವರ ಹೆಸರಿನ ಗ್ರಂಥಾಲಯ ಸದಾ ಹಸಿರಾಗಲೆಂದು ಹಾರೈಸಿರಿ.

**ಮಹಾಕೂಟ–ಪಾಕ್ಷಿಕ ಪತ್ರಿಕೆ** ದಿ:1.10.2002

## ಬಿ.ಎಂ.ಹೊರಕೇರಿ ಕನಸು ನನಸಿನತ್ತ..........

ಈ ವಾರದ ಸಂಪಾದಕೀಯ ಬರೆಯುವಾಗ ನನ್ನ ಮೆಚ್ಚಿನ ಗುರುಗಳು ಮತ್ತು ಹಿತೈಷಿಗಳಾದ ಶ್ರೀಮಾನ ದಿವಂಗತ ಬಿ.ಎಂ.ಹೊರಕೇರಿ ಇವರ ನೆನಪಿನತ್ತ ಮೆಲುಕು ಹಾಕಬೇಕಾಗಿದೆ. ಶ್ರೀಯುತರ ಒಡನಾಟ ಮತ್ತು ಅವರೊಂದಿಗೆ ನಾನು ಕಾಲ ಕಳೆಯುತ್ತಿದ್ದ ಸಮಯದಲ್ಲಿ ಶ್ರೀಮಾನ ಬಿ.ಎಂ.ಹೊರಕೇರಿಯವರು ನದಿಗಳ ಜೋಡಣಿ ವಿಷಯವಾಗಿ ಹತ್ತಾರು ಬಾರಿ ಚರ್ಚಿಸುತ್ತಿದ್ದರು. ಅಷ್ಟೇ ಅಲ್ಲದೆ ಗೋವಾದಲ್ಲಿ ಹರಿಯುತ್ತಿರುವ ಮಹದಾಯಿ ನದಿಯನ್ನು ಈ ಮಲಪ್ರಭೆಗೆ ಜೋಡಿಸುವ ವಿಷಯ ಸಂಬಂಧವಾಗಿ ಯಾವುದೇ ಸರಕಾರವಿರಲಿ ಅವರೊಂದಿಗೆ ಪತ್ರದ ಮುಖಾಂತರ ವಿನಂತಿಸಿಕೊಳ್ಳುತ್ತಿದ್ದರು. ಯಾವುದೇ ಸಭೆ ಸಮಾರಂಭದಲ್ಲಿ ಹಾಗೂ ಮದುವೆ ಸಮಾರಂಭಕ್ಕೂ ಬಂದ ಎಲ್ಲಾ ಜನರ ಅಂಕಿತವನ್ನು ಹಾಕಿಸಿ ಮೇಲಿಂದ ಮೇಲೆ ರಾಜ್ಯ ಸರಕಾರಕ್ಕೆ ಈ ಮಹದಾಯಿ ನದಿಯ ಜೋಡಣೆಗೆ ಹಲವಾರು ಬಾರಿ ಪತ್ರ ಬರೆದಿದ್ದನ್ನು ನಾನು ಕಂಡಿದ್ದೇನೆ.ಹಿಂದೊಮ್ಮೆ ಕಾತರಕಿಯ

ನಿವೃತ್ತ ಗ್ರಾಮ ಸೇವಕ ಎನ್.ಎಚ್. ಪಟೇಲರ ಮಗಳ ಮದುವೆಗೆ ಬಂದಾಗ ಚೋಳಚಗುಡ್ಡದ ವೀರಭದ್ರೇಶ್ವರ ದೇವಸ್ಥಾನದಲ್ಲಿ ಆ ಮದುವೆಗೆ ಬಂದ ಸಮಸ್ತ ಹೊಳೆಸಾಲ ಜನತೆಯ ಒಂದು ಸಾವಿರ ಅಂಕಿತವನ್ನು ಹಾಕಿಸಿ ಇಂದಿನ ಜಲಸಂಪನ್ಮೂಲ ಖಾತೆಸಚಿವ ಎಚ್.ಕೆ. ಪಾಟೀಲ ಇವರಿಗೆ ಪತ್ರ ಬರೆದಿದ್ದನ್ನು ಇಲ್ಲಿ ನೆನಪಿಸಿಕೂಳ್ಳುತ್ತಿದ್ದೇನೆ. ಶ್ರೀ ಎಚ್.ಕೆ.ಪಾಟೀಲರು ಇಂಥ ಮುಖಂಡರ ಮನವಿಯನ್ನು ಹಾಗೂ ಈ ಭಾಗದ ಜನರ ಆಶೋತ್ತರದಂತೆ ಮಹಾದಾಯಿ ಮತ್ತು ಮಲಪ್ರಭಾ ನದಿ ಜೋಡನಾ ಕಾರ್ಯವನ್ನು ಕೈಗೆತ್ತಿಕೊಂಡಿದ್ದಾರೆ. ಸುಮಾರು ೫೪೦ ಕೋಟಿ ರೂ.ವೆಚ್ಚದ ಈ ಯೋಜನೆ ೨೦೦೫ರ ವೇಳೆಗೆ ಮುಕ್ತಾಯಗೊಳಿಸಬೇಕೆಂಬ ಯೋಜನೆ ಸಿದ್ಧವಾಗಿದೆ. ಆದರೆ ಗೋವಾ ಸರ್ಕಾರ ಕೆಲವೊಂದು ಕುಂಟಿತ ನೆಪಗಳನ್ನೊಡ್ಡಿ ಪರಿಸರ ಪ್ರೇಮಿಗಳಿಂದ ಪರಿಸರ ನಾಶವಾಗುತ್ತದೆ ಎಂಬ ಕುಂಟಿತ ನೆಪವನ್ನು ನ್ಯಾಯಾಲಯದ ಮುಂದೆ ಇಟ್ಟಿತು. ಅದಕ್ಕೆ ಇಂದು ತೆರೆಕಾಣುವ ಸಾಧ್ಯತೆಗಳೇ ಹೆಚ್ಚು.

ಪ್ರಸ್ತುತ ಭಾರತ ಸರ್ಕಾರದ ಧಿಟ್ಟ ಹೋರಾಟಗಾರ ವಾಕ್ ಚತುರ ಅಜಾತ ಶತ್ರು ಇನ್ನು ಅನೇಕ ಮಾನ ಸನ್ಮಾನವನ್ನು ಗಿಟ್ಟಿಸಿಕೊಂಡಿರುವ ಸನ್ಮಾನ್ಯ ಅಟಲ್ ಬಿಹಾರಿ ವಾಜಪೇಯಿಯವರು ನದಿಗಳ ಜೋಡಣೆ ಎಂಬ ವಿಷಯವನ್ನು ಕೈಗೆತ್ತಿಕೊಂಡು ಇದರ ಅನುಷ್ಠಾನಕ್ಕೆ ೧೦೦೦ಕೋಟಿ ರೂಪಾಯಿ ವೆಚ್ಚದ ನೀಲನಕ್ಷೆ ಒಂದನ್ನು ಸಿದ್ಧಪಡಿಸಿದ್ದಾರೆ. ಇದು ಈ ದೇಶದ ವಿವಿದೋದ್ದೇಶ ಯೋಜನೆಗಳಾದ ನೀರಾವರಿ ಮೀನುಗಾರಿಕೆ ನಗರ ಸೌಂದರ್ಯಗಳ ವಿದ್ಯುತ್ ತಯಾರಿಕೆ ನೀರಾವರಿ ಇಂಥ ಅನೇಕ ಯೋಜನಗಳಿಗೆ ಅನುಕೂಲವಾಗುವ ದೃಷ್ಟಿಯಿಂದ ಇಂದಿನ ಪ್ರಸ್ತುತ ಸರ್ಕಾರಗಳು ಈ ಯೋಜನೆಗಳನ್ನು ಸಿದ್ಧಪಡಿಸಿ ಹಿಂದಿನ ಮಾಜಿ ಪ್ರಧಾನಿ ದಿ. ಬಾಬು ಜಗಜೀವನರಾಮರವರ ಹಸಿರು ಕ್ರಾಂತಿಯ ಕನಸನ್ನು ಇಂದು ನನಸು ಮಾಡಲು ಹೊರಟಿದ್ದಾರೆ. ಈ ಉತ್ತರ ಕರ್ನಾಟಕದಲ್ಲಿ ಪಂಚ ನದಿಗಳು ಹರಿಯುವ ಈ ಬಾಗಲಕೋಟಿ ಬಿಜಾಪೂರದಲ್ಲಿ ಇದೊಂದು' ಆಶಾಕಿರಣವಾಗಿ ಕೆಲವೊಂದು ವರ್ಷಗಳ ಹಿಂದೆ ಜನ ಈ ಬಗ್ಗೆ ಸಾಕಷ್ಟು ಹೋರಾಟವನ್ನು ಮಾಡಿದೆ. ಅಲ್ಲಿಂದ ಇಲ್ಲಿಯ ವರೆಗೂ ಬೆಳಗಾಂವ, ಗದಗ, ಬಾಗಲಕೋಟೆ ಇನ್ನೂ ಅನೇಕ ಜಿಲ್ಲೆಯ ಸಾವಿರಾರು ಗ್ರಾಮಗಳು ಈ ನದಿಯ ಪ್ರಯೋಜನೆ ಪಡೆದುಕೊಳ್ಳುತ್ತಿಲ್ಲ. ಬರಗಾಲದಿದ ತತ್ತರಿಸುತ್ತಿರುವ ಈ ನದಿಯು



5482-9

ದಡದಲ್ಲಿರುವ ರೈತಾಪಿ ವರ್ಗಕ್ಕೆ ಸತತವಾಗಿ ಈ ನದಿ ಹರಿಯುವುದರಿಂದ ಉತ್ತಮ ಬೆಳೆ ಬಳೆದು ಜನ ಜಾನುವಾರುಗಳು ಬದುಕಿಸುವದರಜೊತೆಗೆ ಆರ್ಥಿಕಾಭಿವೃದ್ಧಿಯನ್ನು ಸಾಧಿಸಿದಂತಾಗುತ್ತದೆ. ಶ್ರೀ ಹೊರಕೇರಿಯವರು ಈ ವಿಷಯುವನ್ನು ಸಾಕಷ್ಟುಸಲ ತಮ್ಮ ಜೀವಿತಾವಧಿಯಲ್ಲಿ ಕಾರ್ಯಗತ ಗೊಳಿಸಬೇಕೆಂಬುದು ದಿಟ್ಟ ನಿರ್ಧಾರವಾಗಿತ್ತು.

ಆದರೆ ಕಾಲಭೈರವ ಶ್ರೀ ಹೊರಕೇರಿ ಅವರನ್ನು ಕರೆದುಕೊಂಡು ಹೋಗಿ ಮಲಪ್ರಭಾ ನಾಡಿನ ಜನತೆ ಕಂಗೆಡುವಂತೆ ಮಾಡಿದ್ದು ಈ ಭಾಗದ ಜನತೆ ಕಾಲಭೈರವನನ್ನು ಶಪಿಸುತ್ತಿರುವುದು ಸುಳ್ಳಲ್ಲ. ಹೊರಕೇರಿಯವರ ಆತ್ಮಕ್ಕೆ ಶಾಂತಿ ಮತ್ತು ಗೌರವ ವಂದನೆಗಳನ್ನು ಅರ್ಪಿಸಬೇಕಾದರೆ ಇಂದಿನ ಜಲಸಂಪನ್ಮೂಲ ಖಾತೆ ಸಚಿವ ಎಚ್.ಕೆ.ಪಾಟೀಲರು ಬಹುಬೇಗನೆ ಈ ಯೋಜನೆ ಕಾರ್ಯಾರಂಭ ಮಾಡಬೇಕು. ನಮ್ಮ ಪತ್ರಿಕೆ ಮಹದಾಯಿ ಯೋಜನೆಯ ಬಗ್ಗೆ ಹತ್ತಾರು ಸಲ ಪ್ರಕಟಿಸಿತ್ತು ಅದೇರೀತಿ ಅಂದಿನ ನಗರಾಭಿವೃದ್ಧಿ ಸಚಿವರು ಅಂದಿನ ಬಾದಾಮಿ ಶಾಸಕರು ಆದ ಬಿ.ಬಿ.ಚಿಮ್ಮನಕಟ್ಟಿಯವರು ದಳ ಸರ್ಕಾರ ಮಂಜೂರಾತಿ ನೀಡಿದ ಬಾದಾಮಿ ಪಟ್ಟಣಕ್ಕೆ ಕುಡಿಯುವ ನೀರಿನ ಯೋಜನೆಯುನ್ನು ಉದ್ಘಾಟಿಸಿ ಬೆನ್ನು ಚಪ್ಪರಿಸಿಕೊಂಡರು. ಆದರೆ ಅಖಂಡ ಬರಗಾಲ ಬಿದ್ದರೂ ಈ ಯೋಜನೆ ಮುಗಿಯುವದಾದರೂ ಯಾವಾಗ ಎಂದು ಬಾದಾಮಿಯ ಪಟ್ಟಣದ ಜನತೆ ಕಾತುರದಿಂದ ಕಾದು ನೋಡುತ್ತಿದ್ದಾರೆ.

**ಕನ್ನಡಸಿರಿ–ಪಾಕ್ಷಿಕ ಪತ್ರಿಕೆ** ದಿನಾಂಕ: 17.02.2003

# ಹೊರಕೇರಿ ಸಾಹೇಬರ ನೆನಪು

ಮೇಲಾಧಿಕಾರಿಗಳಿಗೆ ಬರೆಯುತ್ತಿದ್ದೆ ನೀ ಎಡಬಿಡದೆ ಪತ್ರ
ನೀ ಬಿಡುವವನಲ್ಲ ಅವರಿಂದ ಬರುವವರೆಗೆ ಉತ್ತರ
ನಿನ್ನ ಪತ್ರದಿಂದ, ಸಮಾಜ ಅಭಿವೃದ್ಧಿಯಾಗಿದೆ ಉತ್ತರೋತ್ತರ
ಸಾಕಷ್ಟು ನಿನ್ನ ವಿಚಾರಗಳು ಎಷ್ಟೋ ಮಾಧ್ಯಮಗಳಲ್ಲಿಗೊಂಡಿವೆ ಬಿತ್ತರ.
ನೀನಾಗಿದ್ದೆ ನಾಡಿನೋರ್ವ ಶ್ರೇಷ್ಠ ಪತ್ರಕರ್ತ! ಮನ್ವಂತರ !!

ಪ್ರಸ್ತುತ ಪತ್ರಕರ್ತರೆಲ್ಲಾ ಹಪ್ತಾ ವಸೂಲಿ ಮಾಡುತ್ತಿಹರಲ್ಲ!?
ಆದರೂ ರಾಜಕಾರಣಿ, ಪೊಲೀಸರಷ್ಟೇನಲ್ಲವಲ್ಲ!
ಹ್ಞಾ ! ನೀವೂ ರಾಜಕಾರಣಿಯಲ್ಲವೆ? ಹೌದು, ಈಗೀನಂಥವರಲ್ಲ.
ಸ್ವಾರ್ಥಕ್ಕಾಗಿ ಲೆಕ್ಕ ಸಿಗದಷ್ಟು ಗಳಿಸಿಕೊಂಡಿಹರೆಲ್ಲ,
ನೀನು ನಾಡ-ನುಡಿ-ನೆಲ-ಜಲಕ್ಕಾಗಿ ಬಳಸಿಕೊಂಡಿರುವಿ ಏನೆಲ್ಲ.

ಶಾಸಕರಾಗಿ ನೀವು ಮನೆ-ಮಕ್ಕಳಿಗೆ ಮಾಡಿಕೊಳ್ಳಲಿಲ್ಲ ಏನೂ ಒಂದಿಷ್ಟು
ಇಂದಿನ ಶಾಸಕರು ಮಾಡಿಕೊಳ್ಳುವರು ಸುಟ್ಟರೂ ಸುಡಲಾರದಷ್ಟು
ನೀ ನೌಕರಿ ಕೊಡಿಸಿದೆಲ್ಲ! ಅವರೇ ಗಳಿಸಿಕೊಂಡಿಹರಲ್ಲ ಅದೇಷ್ಟೋ
ನಿನ್ನಲ್ಲಿರಲಿಲ್ಲ ಸಣ್ಣ ವಿಚಾರ ಎಳ್ಳಷ್ಟು, ಸಮಾಜದ ಅಭಿವೃದ್ಧಿಯೇ ಬಹಳಷ್ಟು
ಉಸಿರಿರುವಾಗ ಬಯಸಲಿಲ್ಲಾ ನೀವು ಒಂದಿಷ್ಟೂ ರೆಸ್ಟು

ಮಾಡ್ತಿದ್ದಿ ನೀ ಕೆಲ್ಸ ಧೀನ-ದಲಿತ, ಬಡಜನರ ಪ್ರತಿನಿಧಿಯಾಗಿ
ಈಗಿನ ಜವಪ್ರತಿನಿಧಿಗಳು ಮಾಡ್ತಾ ಸೇವೆ ಸ್ವಾರ್ಥಕ್ಕಾಗಿ,
ಜನ ಸೇವೆಯೇ ಜನಾರ್ಧನ ಸೇವೆ ಎಂದು ಒಂಟಿ ಸಲಗನಾದಿ
ನೀ ಅರ್ಧ ಮಾಡಿದ ಕೆಲಸ ಪೂರ್ತಿ ಮಾಡುವರ‍್ಯಾರೆನ್ನು ವಿಚಾರ ಉಳೀತು ಕಗ್ಗಂಟಾಗಿ,
ವಿಚಾರವಂತರು ನಿನ್ನಪ್ಪತ್ರ ಬರ್‍ತೀಸಂತಾರ ಇಂದಿನವರ ದುರಾಡಳಿತಕ್ಕೆ ಬ್ಯಾಸರಾಗಿ.

ಇಂಥ ವಿಷವರ್ತುಲದಾಗ ನೀ ನಗನಗ್ತಾ ಹ್ಯಾಂಗ ಬದುಕಿದ್ದಿ..!
ಬಾದಾಮಿಯಲ್ಲಿ ಯಾರಿಗೂ ಬರಲಿಕ್ಕಿಲ್ಲ ನಿನ್ನಂಥ ಬುದ್ಧಿ
ಅಧಿಕಾರಿಗಳ ನಿದ್ದೆಗೆಡಿಸುವ ಲೇಖನಿ, ನೀ ನಿಲ್ದ ಮಾಡಾಕ ಹತ್ತೇತಿ ನಿದ್ದಿ,
ಆದರೂ ಭಗವಂತಾಡಿಸೋ ಆಟದಾಗ ನೀ ಚಿನ್ನದ ಪದಕ ಗೆದ್ದಿ
ಮಕ್ಕಳು, ಮುದಕರು ಮತ್ತು ಎಲ್ಲ ಧರ್ಮಿಯರಿಗೂ ನೀ ಬೇಕಾಗಿದ್ದಿ.

**ಕೆ.ಬಿ.ವೀರಲಿಂಗನಗೌಡ್ರ, ಬಾದಾಮಿ**

## ಹೊರಕೇರಿಯವರ ಕೃತಿಗಳ ಕುರಿತು ಪತ್ರಿಕೆಯಲ್ಲಿ ಬಂದ ವಿಮರ್ಶೆ

**ಸರ್ವಜ್ಞ ಸಾಹಿತ್ಯದ ಅಧ್ಯಯನ : ಸಂಯೋಜಕ ಸರ್ವಜ್ಞ**
ಸಂಗ್ರಹ: . ಬಿ.ಎಂ.ಹೊರಕೇರಿ
ರವಿಕೀರ್ತಿ ಪ್ರಕಾಶನ, ಢಾಣಕಶಿರೂರ
ತಾ.ಬಾದಾಮಿ-ಬಿಜಾಪುರ

ವಚನ ಸಾಹಿತಿಯೆಂದು ಖ್ಯಾತನಾದ ಸರ್ವಜ್ಞನ ಸಾಹಿತ್ಯವನ್ನು ಅಧ್ಯಯನ ಮಾಡಿ ಈ ಕೃತಿಯನ್ನು ರಚಿಸಿದವರು ಶ್ರೀ ಬಿ.ಎಂ.ಹೊರಕೇರಿಯವರು. ಸ್ವತಃ ಒಬ್ಬ ಸಾಮಾಜಿಕ ಕಾರ್ಯಕರ್ತರಾದ ಶ್ರೀ ಬಿ.ಎಂ.ಹೊರಕೇರಿಯವರು ಈ ಕೃತಿಯಲ್ಲಿ ಹಲವು ಯೋಗ್ಯ ವಿಚಾರಗಳನ್ನು-ವಚನಗಳನ್ನು ಸಂಗ್ರಹಿಸಿ-ವಿಮರ್ಶಿಸಿ ಪ್ರಕಟಿಸಿದ್ದಾರೆ.

ಸರ್ವಜ್ಞನ ಸಾಹಿತ್ಯ ಶಕ್ತಿ ಅಪಾರವಾದದ್ದು. ಅವನ ವಿಚಾರಗಳು ಆಳವಾದದ್ದು. ಅನೇಕ ವಿಚಾರಗಳು ಸಮಾಜದ ಸರ್ವ ಕಾಲದ ಹಿತವನ್ನು ಕುರಿತು ಬರೆದವು. ಸುಭಾಷಿತಕಾರನಾಗಿ, ರಾಷ್ಟ್ರವಿಚಾರಿಯಾಗಿ, ಮೇಟಿ ವಿದ್ಯೆ ಪ್ರೇಮಿಯಾಗಿ, ಮಿತಹಿಡುವಳಿ, ಮಿತ ಕುಟುಂಬವಾದಿಯಾಗಿ ಅಸ್ಪೃಶ್ಯತಾ ವಿರೋಧಿಯಾಗಿ, ಸ್ತ್ರೀ ಸಮಾನತಾವಾದಿಯಾಗಿ, ಮಧ್ಯಪಾನ ವಿರೋಧಿಯಾಗಿ, ರಾಜನೀತಿ ತಜ್ಞನಾಗಿ ಕಾಲಜ್ಞಾನಿಯಾಗಿ, ರಸಿಕಪ್ರಿಯನಾಗಿ ಸರ್ವಜ್ಞ ಹೇಳಿದ್ದನ್ನು ಸಂಗ್ರಹಿಸಿ ಹಲವು ಸಮಕಾಲೀನ ವಿಚಾರಗಳೊಡನೆ ಅವುಗಳನ್ನು ಹೋಲಿಸಿ ಈ ಕೃತಿಯಲ್ಲಿ ಸರ್ವಜ್ಞನ ವಿಚಾರ, ವಿವೇಕವನ್ನು ಎತ್ತಿ ಹಿಡಿಯುವ ಪ್ರಯತ್ನ ಮಾಡಿದ್ದಾರೆ ಶ್ರೀ ಬಿ.ಎಂ.ಹೊರಕೇರಿಯವರು.

ಒಂದು ನೂರು ಪುಟಗಳ ಈ ಕೃತಿಗೆ ಹಲವು ಮಹನೀಯರ ಸಂದೇಶಗಳಿವೆ. ಶ್ರೀ ಸಿದ್ಧಯ್ಯ ಪುರಾಣಿಕ ಮುನ್ನುಡಿಯಿದೆ. ಶ್ರೀ ಬಿ.ಎಂ.ಹೊರಕೇರಿಯವರು ಕರ್ನಾಟಕದ ಹಿರಿಯ ರಾಜಕಾರಣಗಳಲ್ಲಿ, ಸಾಮಾಜಿಕ ಕಾರ್ಯಕರ್ತರಲ್ಲಿ ಒಬ್ಬರು. ಇವರು ಸರ್ವಜ್ಞನ ವಿಚಾರಗಳನ್ನು ಹೊಸ ದೃಷ್ಟಿಯಿಂದ ನೋಡುತ್ತಾ ಕರ್ನಾಟಕದ ಓದುಗರಿಗೆ ತಮ್ಮ ಕೃತಿಯಲ್ಲಿ ಅವಕಾಶ ಕಲ್ಪಿಸಿ ಕೊಟ್ಟಿದ್ದಾರೆ. ಪುಸ್ತಕದಲ್ಲಿ ಮುದ್ರಣದ ದೋಷ ವಿಪರೀತವಾಗಿದೆ. ಬರೆಯಲು ಹೊರಕೇರಿಯವರು ಬಳಸಿದ ಭಾಷೆ ಅಲ್ಲಲ್ಲಿ ಹಳೆಯದೆನ್ನಿಸುವ ಶೈಲಿಯದಾಗಿದೆಯಾದರೂ ಓದುವ ಉತ್ಸುಕತೆಯನ್ನು ಕಾಪಾಡಿಕೊಳ್ಳುತ್ತದೆ. ಒಟ್ಟಿನಲ್ಲಿ ಶ್ರೀ ಬಿ.ಎಂ.ಹೊರಕೇರಿಯವರ ಪ್ರಯತ್ನ ಪ್ರಯೋಜಕವಾಗಿದೆ.

**ಸಂಯುಕ್ತ ಕರ್ನಾಟಕ,**
ಭಾನುವಾರ, ಜುಲೈ 29, 1979

ನಿವೃತ್ತ ಗ್ರಾಮ ಸೇವಕ ಎಸ್.ಎಚ್. ಪಟೇಲರ ಮಗಳ ಮದುವೆಗೆ ಬಂದಾಗ ಚೋಳಚಗುಡ್ಡದ ವೀರಭದ್ರೇಶ್ವರ ದೇವಸ್ಥಾನದಲ್ಲಿ ಆ ಮದುವೆಗೆ ಬಂದ ಸಮಸ್ತ ಹೊಳೆಸಾಲ ಜನತೆಯ ಒಂದು ಸಾವಿರ ಅಂಕಿತವನ್ನು ಹಾಕಿಸಿ ಇಂದಿನ ಜಲಸಂಪನ್ಮೂಲ ಖಾತೆಸಚಿವ ಎಚ್.ಕೆ. ಪಾಟೀಲ ಇವರಿಗೆ ಪತ್ರ ಬರೆದಿದ್ದನ್ನು ಇಲ್ಲಿ ನೆನಪಿಸಿಕೊಳ್ಳುತ್ತಿದ್ದೇನೆ. ಶ್ರೀ ಎಚ್.ಕೆ.ಪಾಟೀಲರು ಇಂಥ ಮುಖಂಡರ ಮನವಿಯನ್ನು ಹಾಗೂ ಈ ಭಾಗದ ಜನರ ಆಶೋತ್ತರದಂತೆ ಮಹಾದಾಯಿ ಮತ್ತು ಮಲಪ್ರಭಾ ನದಿ ಜೋಡನಾ ಕಾರ್ಯವನ್ನು ಕೈಗೆತ್ತಿಕೊಂಡಿದ್ದಾರೆ. ಸುಮಾರು ೫೪೦ ಕೋಟಿ ರೂ.ವೆಚ್ಚದ ಈ ಯೋಜನೆ ೨೦೦೫ರ ವೇಳೆಗೆ ಮುಕ್ತಾಯಗೊಳಿಸಬೇಕೆಂಬ ಯೋಜನೆ ಸಿದ್ಧವಾಗಿದೆ. ಆದರೆ ಗೋವಾ ಸರ್ಕಾರ ಕೆಲವ್ರೊಂದು ಕುಂಟಿತ ನೆಪಗಳನ್ನೊಡ್ಡಿ ಪರಿಸರ ಪ್ರೇಮಿಗಳಿಂದ ಪರಿಸರ ನಾಶವಾಗುತ್ತದೆ ಎಂಬ ಕುಂಟಿತ ನೆಪವನ್ನು ನ್ಯಾಯಾಲಯದ ಮುಂದೆ ಇಟ್ಟಿತು. ಅದಕ್ಕೆ ಇಂದು ತೆರೆಕಾಣುವ ಸಾಧ್ಯತೆಗಳೇ ಹೆಚ್ಚು.

ಪ್ರಸ್ತುತ ಭಾರತ ಸರ್ಕಾರದ ಧಿಟ್ಟ ಹೋರಾಟಗಾರ ವಾಕ್ ಚತುರ ಅಜಾತ ಶತ್ರು ಇನ್ನು ಅನೇಕ ಮಾನ ಸನ್ಮಾನವನ್ನು ಗಿಟ್ಟಿಸಿಕೊಂಡಿರುವ ಸನ್ಮಾನ್ಯ ಅಟಲ್ ಬಿಹಾರಿ ವಾಜಪೇಯಿಯವರು ನದಿಗಳ ಜೋಡಣೆ ಎಂಬ ವಿಷಯವನ್ನು ಕೈಗೆತ್ತಿಕೊಂಡು ಇದರ ಅನುಷ್ಠಾನಕ್ಕೆ ೧೦೦೦ಕೋಟಿ ರೂಪಾಯಿ ವೆಚ್ಚದ ನೀಲನಕ್ಷೆ ಒಂದನ್ನು ಸಿದ್ದಪಡಿಸಿದ್ದಾರೆ. ಇದು ಈ ದೇಶದ ವಿವಿದೋದ್ದೇಶ ಯೋಜನೆಗಳಾದ ನೀರಾವರಿ ಮೀನುಗಾರಿಕೆ ನಗರ ಸೌಂದರ್ಯಗಳ ವಿದ್ಯುತ್ ತಯಾರಿಕೆ ನೀರಾವರಿ ಇಂಥ ಅನೇಕ ಯೋಜನಗಳಿಗೆ ಅನುಕೂಲವಾಗುವ ದೃಷ್ಟಿಯಿಂದ ಇಂದಿನ ಪ್ರಸ್ತುತ ಸರ್ಕಾರಗಳು ಈ ಯೋಜನೆಗಳನ್ನು ಸಿದ್ದಪಡಿಸಿ ಹಿಂದಿನ ಮಾಜಿ ಪ್ರಧಾನಿ ದಿ. ಬಾಬು ಜಗಜೀವನರಾಮರವರ ಹಸಿರು ಕ್ರಾಂತಿಯ ಕನಸನ್ನು ಇಂದು ನನಸು ಮಾಡಲು ಹೊರಟಿದ್ದಾರೆ. ಈ ಉತ್ತರ ಕರ್ನಾಟಕದಲ್ಲಿ ಪಂಚ ನದಿಗಳು ಹರಿಯುವ ಈ ಬಾಗಲಕೋಟಿ ಬಿಜಾಪೂರದಲ್ಲಿ ಇದೊಂದು' ಆಶಾಕಿರಣವಾಗಿ ಕೆಲವ್ರೊಂದು ವರ್ಷಗಳ ಹಿಂದೆ ಜನ ಈ ಬಗ್ಗೆ ಸಾಕಷ್ಟು ಹೋರಾಟವನ್ನು ಮಾಡಿದೆ. ಅಲ್ಲಿಂದ ಇಲ್ಲಿಯ ವರೆಗೂ ಬೆಳಗಾಂವ, ಗದಗ, ಬಾಗಲಕೋಟೆ ಇನ್ನೂ ಅನೇಕ ಜಿಲ್ಲೆಯ ಸಾವಿರಾರು ಗ್ರಾಮಗಳು ಈ ನದಿಯ ಪ್ರಯೋಜನೆ ಪಡೆದುಕೊಳ್ಳುತ್ತಿಲ್ಲ. ಬರಗಾಲದಿದ ತತ್ತರಿಸುತ್ತಿರುವ ಈ ನದಿಯ



5482-9

ದಡದಲ್ಲಿರುವ ರೈತಾಪಿ ವರ್ಗಕ್ಕೆ ಸತತವಾಗಿ ಈ ನದಿ ಹರಿಯುವುದರಿಂದ ಉತ್ತಮ ಬೆಳೆ ಬಳೆದು ಜನ ಜಾನುವಾರುಗಳು ಬದುಕಿಸುವದರಜೊತೆಗೆ ಆರ್ಥಿಕಾಭಿವೃದ್ದಿಯನ್ನು ಸಾಧಿಸಿದಂತಾಗುತ್ತದೆ. ಶ್ರೀ ಹೊರಕೇರಿಯುವರು ಈ ವಿಷಯವನ್ನು ಸಾಕಷ್ಟುಸಲ ತಮ್ಮ ಜೀವಿತಾವಧಿಯಲ್ಲಿ ಕಾರ್ಯಗತ ಗೊಳಿಸಬೇಕೆಂಬುದು ದಿಟ್ಟ ನಿರ್ಧಾರವಾಗಿತ್ತು.

ಆದರೆ ಕಾಲಭೈರವ ಶ್ರೀ ಹೊರಕೇರಿ ಅವರನ್ನು ಕರೆದುಕೊಂಡು ಹೋಗಿ ಮಲಪ್ರಭಾ ನಾಡಿನ ಜನತೆ ಕಂಗೆಡುವಂತೆ ಮಾಡಿದ್ದು ಈ ಭಾಗದ ಜನತೆ ಕಾಲಭೈರವನನ್ನು ಶಪಿಸುತ್ತಿರುವುದು ಸುಳ್ಳಲ್ಲ. ಹೊರಕೇರಿಯವರ ಆತ್ಮಕ್ಕೆ ಶಾಂತಿ ಮತ್ತು ಗೌರವ ವಂದನೆಗಳನ್ನು ಅರ್ಪಿಸಬೇಕಾದರೆ ಇಂದಿನ ಜಲಸಂಪನ್ಮೂಲ ಖಾತೆ ಸಚಿವ ಎಚ್.ಕೆ.ಪಾಟೀಲರು ಬಹುಬೇಗನೆ ಈ ಯೋಜನೆ ಕಾರ್ಯಾರಂಭ ಮಾಡಬೇಕು. ನಮ್ಮ ಪತ್ರಿಕೆ ಮಹದಾಯಿ ಯೋಜನೆಯ ಬಗ್ಗೆ ಹತ್ತಾರು ಸಲ ಪ್ರಕಟಿಸಿತ್ತು ಅದೇರೀತಿ ಅಂದಿನ ನಗರಾಭಿವೃದ್ಧಿ ಸಚಿವರು ಅಂದಿನ ಬಾದಾಮಿ ಶಾಸಕರು ಆದ ಬಿ.ಬಿ.ಚಿಮ್ಮನಕಟ್ಟಿಯವರು ದಳ ಸರ್ಕಾರ ಮಂಜೂರಾತಿ ನೀಡಿದ ಬಾದಾಮಿ ಪಟ್ಟಣಕ್ಕೆ ಕುಡಿಯುವ ನೀರಿನ ಯೋಜನೆಯನ್ನು ಉದ್ಘಾಟಿಸಿ ಬೆನ್ನು ಚಪ್ಪರಿಸಿಕೊಂಡರು. ಆದರೆ ಅಖಂಡ ಬರಗಾಲ ಬಿದ್ದರೂ ಈ ಯೋಜನೆ ಮುಗಿಯುವದಾದರೂ ಯಾವಾಗ ಎಂದು ಬಾದಾಮಿಯ ಪಟ್ಟಣದ ಜನತೆ ಕಾತುರದಿಂದ ಕಾದು ನೋಡುತ್ತಿದ್ದಾರೆ.

**ಕನ್ನಡಸಿರಿ–ಪಾಕ್ಷಿಕ ಪತ್ರಿಕೆ** ದಿನಾಂಕ: 17.02.2003

# ಹೊರಕೇರಿ ಸಾಹೇಬರ ನೆನಪು

ಮೇಲಾಧಿಕಾರಿಗಳಿಗೆ ಬರೆಯುತ್ತಿದ್ದೆ ನೀ ಎಡಬಿಡದೆ ಪತ್ರ
ನೀ ಬಿಡುವವನಲ್ಲ ಅವರಿಂದ ಬರುವವರೆಗೆ ಉತ್ತರ
ನಿನ್ನ ಪತ್ರದಿಂದ, ಸಮಾಜ ಅಭಿವೃದ್ಧಿಯಾಗಿದೆ ಉತ್ತರೋತ್ತರ
ಸಾಕಷ್ಟು ನಿನ್ನ ವಿಚಾರಗಳು ಎಷ್ಟೋ ಮಾಧ್ಯಮಗಳಲ್ಲಿಗೊಂಡಿವೆ ಬಿತ್ತರ.
ನೀನಾಗಿದ್ದೆ ನಾಡಿನೋರ್ವ ಶ್ರೇಷ್ಠ ಪತ್ರಕರ್ತ! ಮನ್ವಂತರ !!

ಪ್ರಸ್ತುತ ಪತ್ರಕರ್ತರೆಲ್ಲಾ ಹಪ್ತಾ ವಸೂಲಿ ಮಾಡುತ್ತಿಹರಲ್ಲ!?
ಆದರೂ ರಾಜಕಾರಣಿ, ಪೊಲೀಸರಷ್ಟೇನಲ್ಲವಲ್ಲ!
ಹ್ಞಾ ! ನೀವ್ರೂ ರಾಜಕಾರಣಿಯಲ್ಲವೆ? ಹೌದು, ಈಗೀನಂಥವರಲ್ಲ.
ಸ್ವಾರ್ಥಕ್ಕಾಗಿ ಲೆಕ್ಕ ಸಿಗದಷ್ಟು ಗಳಿಸಿಕೊಂಡಿಹರೆಲ್ಲ,
ನೀನು ನಾಡ-ನುಡಿ-ನೆಲ-ಜಲಕ್ಕಾಗಿ ಬಳಸಿಕೊಂಡಿರುವಿ ಏನೆಲ್ಲ.

ಶಾಸಕರಾಗಿ ನೀವು ಮನೆ-ಮಕ್ಕಳಿಗೆ ಮಾಡಿಕೊಳ್ಳಲಿಲ್ಲ ಏನೂ ಒಂದಿಷ್ಟು
ಇಂದಿನ ಶಾಸಕರು ಮಾಡಿಕೊಳ್ಳುವರು ಸುಟ್ಟರೂ ಸುಡಲಾರದಷ್ಟು
ನೀ ನೌಕರಿ ಕೊಡಿಸಿದೆಲ್ಲ! ಅವರೇ ಗಳಿಸಿಕೊಂಡಿಹರಲ್ಲ ಅದೇಷ್ಟೋ
ನಿನ್ನಲ್ಲಿರಲಿಲ್ಲ ಸಣ್ಣ ವಿಚಾರ ಎಳ್ಳಷ್ಟು, ಸಮಾಜದ ಅಭಿವೃದ್ಧಿಯೇ ಬಹಳಷ್ಟು
ಉಸಿರಿರುವಾಗ ಬಯಸಲಿಲ್ಲಾ ನೀವು ಒಂದಿಷ್ಟೂ ರೆಸ್ಟು

ಮಾಡ್ತಿದ್ದಿ ನೀ ಕೆಲ್ಸ ಧೀನ-ದಲಿತ, ಬಡಜನರ ಪ್ರತಿನಿಧಿಯಾಗಿ
ಈಗಿನ ಜವಪ್ರತಿನಿಧಿಗಳು ಮಾಡ್ತಾ ಸೇವೆ ಸ್ವಾರ್ಥಕ್ಕಾಗಿ,
ಜನ ಸೇವೆಯೇ ಜನಾರ್ಧನ ಸೇವೆ ಎಂದು ಒಂಟಿ ಸಲಗನಾದಿ
ನೀ ಅರ್ಧ ಮಾಡಿದ ಕೆಲಸ ಪೂರ್ತಿ ಮಾಡುವರ‍್ಯಾರೆನ್ನು ವಿಚಾರ ಉಳೀತು ಕಗ್ಗಂಟಾಗಿ,
ವಿಚಾರವಂತರು ನಿನ್ಹತ್ರ ಬರ್ತೀನಂತಾರ ಇಂದಿನವರ ದುರಾಡಳಿತಕ್ಕೆ ಬ್ಯಾಸರಾಗಿ.

ಇಂಥ ವಿಷವರ್ತುಲದಾಗ ನೀ ನಗನಗ್ತಾ ಹ್ಯಾಂಗ ಬದುಕಿದ್ದಿ..!
ಬಾದಾಮಿಯಲ್ಲಿ ಯಾರಿಗೂ ಬರಲಿಕ್ಕಿಲ್ಲ ನಿನ್ನಂಥ ಬುದ್ದಿ
ಅಧಿಕಾರಿಗಳ ನಿದ್ದೆಗೆಡಿಸುವ ಲೇಖನಿ, ನೀ ನಿಲ್ದ ಮಾಡಾಕ ಹತ್ತೇತಿ ನಿದ್ದಿ,
ಆದರೂ ಭಗವಂತಾಡಿಸೋ ಆಟದಾಗ ನೀ ಚಿನ್ನದ ಪದಕ ಗೆದ್ದಿ
ಮಕ್ಕಳು, ಮುದಕರು ಮತ್ತು ಎಲ್ಲ ಧರ್ಮಿಯರಿಗೂ ನೀ ಬೇಕಾಗಿದ್ದಿ.

ಕೆ.ಬಿ.ವೀರಲಿಂಗನಗೌಡ್ರ, ಬಾದಾಮಿ

# ಹೊರಕೇರಿಯವರ ಕೃತಿಗಳ ಕುರಿತು ಪತ್ರಿಕೆಯಲ್ಲಿ ಬಂದ ವಿಮರ್ಶೆ

**ಸರ್ವಜ್ಞ ಸಾಹಿತ್ಯದ ಅಧ್ಯಯನ : ಸಂಯೋಜಕ ಸರ್ವಜ್ಞ**
ಸಂಗ್ರಹ: ಬಿ.ಎಂ.ಹೊರಕೇರಿ
ರವಿಕೀರ್ತಿ ಪ್ರಕಾಶನ, ಢಾಣಕಶಿರೂರ
ತಾ.ಬಾದಾಮಿ-ಬಿಜಾಪುರ

ವಚನ ಸಾಹಿತಿಯೆಂದು ಖ್ಯಾತನಾದ ಸರ್ವಜ್ಞನ ಸಾಹಿತ್ಯವನ್ನು ಅಧ್ಯಯನ ಮಾಡಿ ಈ ಕೃತಿಯನ್ನು ರಚಿಸಿದವರು ಶ್ರೀ ಬಿ.ಎಂ.ಹೊರಕೇರಿಯವರು. ಸ್ವತಃ ಒಬ್ಬ ಸಾಮಾಜಿಕ ಕಾರ್ಯಕರ್ತರಾದ ಶ್ರೀ ಬಿ.ಎಂ.ಹೊರಕೇರಿಯವರು ಈ ಕೃತಿಯಲ್ಲಿ ಹಲವು ಯೋಗ್ಯ ವಿಚಾರಗಳನ್ನು-ವಚನಗಳನ್ನು ಸಂಗ್ರಹಿಸಿ-ವಿಮರ್ಶಿಸಿ ಪ್ರಕಟಿಸಿದ್ದಾರೆ.

ಸರ್ವಜ್ಞನ ಸಾಹಿತ್ಯ ಶಕ್ತಿ ಅಪಾರವಾದದ್ದು. ಅವನ ವಿಚಾರಗಳು ಆಳವಾದದ್ದು. ಅನೇಕ ವಿಚಾರಗಳು ಸಮಾಜದ ಸರ್ವ ಕಾಲದ ಹಿತವನ್ನು ಕುರಿತು ಬರೆದವು. ಸುಭಾಷಿತಕಾರನಾಗಿ, ರಾಷ್ಟ್ರವಿಚಾರಿಯಾಗಿ, ಮೇಟಿ ವಿದ್ಯೆ ಪ್ರೇಮಿಯಾಗಿ, ಮಿತಹಿಡುವಳಿ, ಮಿತ ಕುಟುಂಬವಾದಿಯಾಗಿ ಅಸ್ಪೃಶ್ಯತಾ ವಿರೋಧಿಯಾಗಿ, ಸ್ತ್ರೀ ಸಮಾನತಾವಾದಿಯಾಗಿ, ಮಧ್ಯಪಾನ ವಿರೋಧಿಯಾಗಿ, ರಾಜನೀತಿ ತಜ್ಞನಾಗಿ ಕಾಲಜ್ಞಾನಿಯಾಗಿ, ರಸಿಕಪ್ರಿಯನಾಗಿ ಸರ್ವಜ್ಞ ಹೇಳಿದ್ದನ್ನು ಸಂಗ್ರಹಿಸಿ ಹಲವು ಸಮಕಾಲೀನ ವಿಚಾರಗಳೊಡನೆ ಅವುಗಳನ್ನು ಹೋಲಿಸಿ ಈ ಕೃತಿಯಲ್ಲಿ ಸರ್ವಜ್ಞನ ವಿಚಾರ, ವಿವೇಕವನ್ನು ಎತ್ತಿ ಹಿಡಿಯುವ ಪ್ರಯತ್ನ ಮಾಡಿದ್ದಾರೆ ಶ್ರೀ ಬಿ.ಎಂ.ಹೊರಕೇರಿಯವರು.

ಒಂದು ನೂರು ಪುಟಗಳ ಈ ಕೃತಿಗೆ ಹಲವು ಮಹನೀಯರ ಸಂದೇಶಗಳಿವೆ. ಶ್ರೀ ಸಿದ್ಧಯ್ಯ ಪುರಾಣಿಕ ಮುನ್ನುಡಿಯಿದೆ. ಶ್ರೀ ಬಿ.ಎಂ.ಹೊರಕೇರಿಯವರು ಕರ್ನಾಟಕದ ಹಿರಿಯ ರಾಜಕಾರಣಗಳಲ್ಲಿ, ಸಾಮಾಜಿಕ ಕಾರ್ಯಕರ್ತರಲ್ಲಿ ಒಬ್ಬರು. ಇವರು ಸರ್ವಜ್ಞನ ವಿಚಾರಗಳನ್ನು ಹೊಸ ದೃಷ್ಟಿಯಿಂದ ನೋಡುತ್ತಾ ಕರ್ನಾಟಕದ ಓದುಗರಿಗೆ ತಮ್ಮ ಕೃತಿಯಲ್ಲಿ ಅವಕಾಶ ಕಲ್ಪಿಸಿ ಕೊಟ್ಟಿದ್ದಾರೆ. ಪುಸ್ತಕದಲ್ಲಿ ಮುದ್ರಣದ ದೋಷ ವಿಪರೀತವಾಗಿದೆ. ಬರೆಯಲು ಹೊರಕೇರಿಯವರು ಬಳಸಿದ ಭಾಷೆ ಅಲ್ಲಲ್ಲಿ ಹಳೆಯದೆನ್ನಿಸುವ ಶೈಲಿಯದಾಗಿದೆಯಾದರೂ ಓದುವ ಉತ್ಸುಕತೆಯನ್ನು ಕಾಪಾಡಿಕೊಳ್ಳುತ್ತದೆ. ಒಟ್ಟಿನಲ್ಲಿ ಶ್ರೀ ಬಿ.ಎಂ.ಹೊರಕೇರಿಯವರ ಪ್ರಯತ್ನ ಪ್ರಯೋಜಕವಾಗಿದೆ.

**ಸಂಯುಕ್ತ ಕರ್ನಾಟಕ,**
ಭಾನುವಾರ, ಜುಲೈ 29, 1979

## ಅಭಿಪ್ರಾಯಗಳು:

## ಸಂಯೋಜಕ ಸರ್ವಜ್ಞ

ಸಂಗ್ರಹ: ಬಿ.ಎಂ.ಹೊರಕೇರಿ

ರವಿಕೀರ್ತಿ ಪ್ರಕಾಶನ, ಢಾಣಕಶಿರೂರ

ತಾ.ಬಾದಾಮಿ-ಬಿಜಾಪುರ

ಲೇಖಕರೆ ಹೇಳುವಂತೆ ಈ ಚಿಕ್ಕ ಹೊತ್ತಿಗೆಯು ಸರ್ವಜ್ಞಮೂರ್ತಿಯ "ಚತುಃ ಶತಮಾನ" ಉತ್ಸವ ಕಾಲದಲ್ಲಿ ಪ್ರಕಟಿಸಬೇಕಾಗಿತ್ತು. ಆದರೆ ತಡವಾಗಿ 1978ರಲ್ಲಿ ಪ್ರಕಟಗೊಂಡಿದೆ. ಇರಲಿ, ಸಂಗ್ರಹಕಾರರ ಸಂಗ್ರಹಣೆ ಚರ್ವಿತ ಚರ್ವಣವಾಗಿದೆ ಎಂದು ಅನಿವಾರ್ಯವಾಗಿ ಒಪ್ಪಬೇಕಾದ ಸಂಗತಿ! "ಇದು ನನ್ನ ಚೊಚ್ಚಲ ಕೃತಿ.-ಸಂಶೋಧಕರ ದೃಷ್ಟಿಯಿಂದ ಸಂಗ್ರಹಿಸಿ ಜೋಡಿಸಿ ಬರೆದುದು" ಎನ್ನುವ ಅವರ ಹೇಳಿಕೆ ಸಮರ್ಪಕವಾಗಿದ್ದರೂ ಕೃತಿಯನ್ನು ನೋಡಿದಾಗ ಸಂಗ್ರಹಣೆಯ ಕೆಲಸ ಸುಲಭವಲ್ಲವೆಂಬುದು ಎದ್ದು ಕಾಣುತ್ತದೆ. ಈಗಾಗಲೇ ಸರ್ವಜ್ಞನ ಬಗ್ಗೆ ಅನೇಕ ಕೃತಿಗಳು ಬಂದು ಹೋಗಿವೆ. ಇಲ್ಲಿ ಓದುಗನು ಹೊಸತನ್ನು ಗ್ರಹಿಸಲಾರ. ಸಾಮಾನ್ಯರ ಬಾಯಲ್ಲಿರುವ ಸಾಮಾನ್ಯ ಹೇಳಿಕೆಗಳು ಇಲ್ಲಿ ಅನೇಕ ಕೆಸಲಗಳಲ್ಲಿಯೂ ಈ ಹೊತ್ತಿಗೆಗೆ ಒಂದು ಹೊಸತನ ತಂದು ಸಾಮಾನ್ಯ ಹಳ್ಳಿಗನಿಗೂ ಕೂಡಾ ಓದಿ ಅರ್ಥ ಮಾಡಿಕೊಳ್ಳುವಂತೆ ಪ್ರಯತ್ನಿಸಿದ್ದಾರೆ. ಶಾಲಾ ಮಕ್ಕಳೂ ಕೂಡ ಓದಿ ಸರ್ವಜ್ಞನ ಬಗ್ಗೆ ಅಭಿಮಾನ ತಾಳಬಹುದಾಗಿದೆ. ರೆ.ಉತ್ತಂಗಿಯವರನ್ನು ಸ್ಮರಿಸಿಕೊಂಡು ಲೇಖಕರು ಉತ್ತಂಗಿಯವರ ಹೇಳಿಕೆಯನ್ನೇ ಇತ್ತಿರುವುದು ಒಂದು ರೀತಿಯಿಂದ ಉಚಿತ. ಎಷ್ಟಾದರೂ ಈ ಕೃತಿ ಸಂಗ್ರಹವೇ ಆಗಿದ್ದು ಸಂಯೋಜಕರ ಕಾರ್ಯ ಸುಲಭಗೊಳಿಸಿದೆ. ಲೇಖಕರು ಅಲ್ಲಲ್ಲಿ ತಮ್ಮದೇ ಆದ ವಿವರಣೆ ಕೊಡುತ್ತ ಹೋಗಿದ್ದಾರೆ. ಓದುಗನು 'ಅಹುದಾದರೆ ಅಹುದೆನ್ನಬಹುದು; ಇಲ್ಲವಾದರೆ ಇಲ್ಲವೆನ್ನಬಹುದು" ಅವನ ಸ್ವಾತಂತ್ರ್ಯ ಅವನಿಗೆ ಇದ್ದೇ ಇದೆ. ನೂರು ಪುಟದ ಈ ಚಿಕ್ಕ ಹೊತ್ತಿಗೆ ಇಪ್ಪತ್ತೆರಡು ಪುಟಗಳ ಭಾರವಾದ ಸಂದೇಶ ಅಭಿಪ್ರಾಯ ಮೊದಲಾದವುಗಳ ಭಾರಹೊತ್ತು ನಿಂತಿದೆ. ಭಾಷೆ ಶೈಲಿಗಳ ಕಡೆಗೆ ಅಷ್ಟು ಗಮನವಿಡದ ಈ ಸಂಗ್ರಹಕರನ್ನು ಕುರಿತು ಗೆಳೆಯ

ಶ್ರೀಬಿ.ಟಿ.ಸಾಸನೂರ) ಅವರ ಹೇಳಿಕೆ ಇಂತಿದೆ. ಇಂದಿನ ಸರ್ಕಾರಗಳು ಹಮ್ಮಿಕೊಳ್ಳುವ ಪಂಚವಾರ್ಷಿಕ ಯೋಜನೆಗಳ ಕಾರ್ಯಕ್ರಮಗಳನ್ನು......... ಸರ್ವಜ್ಞ ವಚನಗಳಲ್ಲಿ ಕಂಡುಕೊಂಡು....... ಮನಂಬುಗುವಂತೆ ನಿರೂಪಿಸಿದ್ದಾರೆ. ಈ ಕಾರ್ಯ ಈ ಹೊತ್ತಿಗೆಯಿಂದಾಗಲು ಸಾಧ್ಯ. ಲೇಖಕರು ಪಟ್ಟ ಶ್ರಮಸಾರ್ಥಕ. ಮುದ್ರಣ ದೋಷಗಳು ಬಹಳ. ಮುದ್ದಾದ ಸರ್ವಜ್ಞನ ಮೂರ್ತಿ ರಕ್ಷಾಪುಟಕ್ಕೆ ಅಂದ ತಂದಿದೆ.

**ಬಿ.ಆರ್.ವಾಡಪ್ಪಿ** (ಸಂಯುಕ್ತ ಕರ್ನಾಟಕ, ಸಾಪ್ತಾಹಿಕ ಸೌರಭ, 22.06.1980)

# ಶ್ರೀ ಬಿ.ಎಂ. ಹೊರಕೇರಿಯವರ ಪತ್ರಿಕಾ ಲೇಖನ

## ಸುಸಂಬದ್ಧ ರೈತ ಸಂಘಟನೆ ಅವಶ್ಯ

ರಾಷ್ಟ್ರಾದ್ಯಾಂತ ಸಂಘಟನೆಯಿಲ್ಲದ ಅಸಮರ್ಥ ರೈತ ಕೂಲಿಕಾರರ ಆರ್ಥಿಕ ಪ್ರಗತಿ ಅವರ ಜೀವನದ ಅಂತಸ್ತು ಎತ್ತರಿಸುವ ಉದ್ದೇಶ ಗೊತ್ತು ಗುರಿಗಳನ್ನಿಟ್ಟು ರೈತ ಕೂಲಿಕಾರರ ಉದ್ಧಾರ ಮಾಡುವುದಕ್ಕಾಗಿ ರೈತ ಹಾಗೂ ರೈತಕೂಲಿಕಾರರ ಸಂಘ ಸಂಸ್ಥೆಗಳನ್ನು ಅನೇಕ ರೀತಿಯಾಗಿ ಸಂಘಟಿಸಿ ರಾಜ್ಯಾದ್ಯಾಂತ ಹೋರಾಟ ಮಾಡುತ್ತಾ ಬಂದಿರುವ ಅನೇಕ ರೈತ ಮುಂದಾಳುಗಳ ನಾಯಕರುಗಳ ಸಾಹಸಯುತ ಆಸ್ಥೆ, ತ್ಯಾಗ, ಶ್ರಮಗಳಿಗಾಗಿ ರಾಷ್ಟ್ರದ ರೈತ ಕೂಲಿಕಾರರೆಲ್ಲರೂ ಇವರುಗಳಿಗೆ ಕೃತಜ್ಞತೆಗಳನ್ನು ಎಷ್ಟು ಸಲ್ಲಿಸಿದರೂ ಕಡಿಮೆಯೇ.

ಆದರೆ ಈ ಸಂಘಟನೆಯಲ್ಲಿ ಸರಿಯಾದ ಹೊಂದಾಣಿಕೆ ಇಲ್ಲದೇ ಅಸಹಕಾರ ಭಿನ್ನಾಭಿಪ್ರಾಯ ಇವೆಲ್ಲವುಗಳೂ ತಲೆದೋರಿ ಅನೈಕ್ಯ ಉಂಟಾಗಿ ಸಂಘಟನೆಗಳು ಒಡೆದು ತುಂಡಾಗಿ ಭಿನ್ನಮತಿಯರ ಗುಂಪುಗಳು ಸಿಡಿದು ಸಮಾಂತರ ಸಂಘಟನೆಯುನ್ನು ಕಟ್ಟುವುದಕ್ಕಾಗಿ ರಾಷ್ಟ್ರ ರಾಜ್ಯಗಳಲ್ಲೇ ಸಾಧಿಸುತ್ತಿರುವುದಾಗಲೀ ಈ ಸಂಘಟನೆಗಳ ಮೂಲಕವೇ ವೈಯಕ್ತಿಕ ಗುಂಪಿನ ಹಿತಾಸಕ್ತಿ ಪ್ರತಿಷ್ಠೆಗೋಸುಗ ಹೆಣಗಾಡುತ್ತಿರುವುದಾಗಲಿ ಕಂಡು ಬಂದಿದೆ. ಹೀಗೆ ಸಾಧಿಸುತ್ತಿರುವ ಹಾಗೂ ಹೆಣಗಾಡುತ್ತಿರುವ ಸಂಘಗಳಿಂದ ರೈತ,

ರೈತಕೂಲಿಕಾರರ ಉತ್ಕರ್ಷವಾಗದೇ ಅವರ ಅವನತಿಗೆ ಕಾರಣವೆಂದು ಒತ್ತಿ ಹೇಳಬಹುದು. ಸಂಘಟನೆಯ ಪದಾಧಿಕಾರಿಗಳಾಗಲಿ ಸಿಡಿದು ಬಂದಿರುವ ರೈತ ನಾಯಕರಾಗಲಿ ಯಾರೂ ಅನ್ಯೋನ್ಯವಾಗಿ ಹೊಂದಾಣಿಕೆ ಮಾಡುವ ಹಾಗೂ ಸಾಧನಗೊಳಿಸುವ ಗೋಜಿಗೆ ಹೋಗದೇ ಪ್ರತಿಯೊಂದು ಗುಂಪಿನವರು ತಮ್ಮ ತಮ್ಮ ಒಣ ಪ್ರತಿಷ್ಠೆ, ಹೇವ, ಪಂಥ ಪಕ್ಷಗಳಾಗಿ ತಾವು ಹಿಡಿದ ಹಟವನ್ನೇ ಸಾಧಿಸುತ್ತಾ ಮುಂದುವರೆದಿದ್ದಾರೆ.

ಸರಕಾರಿ ಆಡಳಿತೆಯ ಬಿಕ್ಕಟ್ಟು ಇಕ್ಕಟ್ಟುಗಳೊಡನೆ ಹೋರಾಡಲು ಎದುರಿಸಲು ಪ್ರತಿಭಟಿಸಲು ರಾಷ್ಟ್ರಾದ್ಯಂತವಾಗಿ ಒಕ್ಕೊರಲಿನಿಂದ ಘೋಷಿಸುವ ಆಸ್ಥೆಯುಳ್ಳ ನಿಸ್ವಾರ್ಥ ಪ್ರಾಮಾಣಿಕ ತ್ಯಾಗ, ಸಹಕಾರ ಐಕ್ಯತೆಯ ಮನೋಭಾವನೆಯನ್ನು ಒಂದೇ ಒಂದಾದ ಸಮರ್ಥ ಸದ್ಭಾವನೆಯ ಸಂಘಟನೆ ಇಂದು ರಾಷ್ಟ್ರದಲ್ಲಿ ಅಗತ್ಯವಿದೆ. ರಾಷ್ಟ್ರದ ಮಾನಧನವಾದ ಹಾಗೂ ಸತ್ವಶಾಲಿಯಾದ ಕೃಷಿಕ(ರೈತ) ವರ್ಗವು ನಷ್ಟವಾದರೆ ಅದು ನಾಡಿಗೆ ಎಂದಿಗೂ ತುಂಬಿಬರಲಾಗದ ಹಾನಿಯಾಗುವುದು. ಯಾವುದೇ ರಾಷ್ಟ್ರದ ಸಂಪತ್ತನ್ನು ಆ ರಾಷ್ಟ್ರದ ರೈತರ ಸಂಪತ್ತಿನ ಅಳತೆಗೋಲಿನಿಂದಲೇ ಅಳೆಯಬಹುದಲ್ಲವೇ. ಬೇರೊಂದು ರೀತಿಯಿಂದ ಅಲ್ಲ. ಅದು ಕಾರಣ ರೈತನ ಆರ್ಥಿಕ ಸ್ಥಿತಿ ಸುಧಾರಿಸಲು ಅಗತ್ಯವಿದ್ದ ಬೇಡಿಕೆಗಳನ್ನು ಸರಕಾರವೂ ಮನ್ನಿಸಿದಾಗಲೇ ಹಾಗೂ ರೈತನ ಸಮಸ್ಯೆಗಳನ್ನು ಪರಿಹರಿಸಿದಾಗಲೇ ರಾಷ್ಟ್ರದ ಆರ್ಥಿಕ ಪ್ರಗತಿ ಸುಧಾರಿಸಲು ಸಾಧ್ಯ.

ಸಾಲದಲ್ಲಿ ಹುಟ್ಟಿ ಸಾಲದಲ್ಲಿ ಬೆಳೆದು ಸಾಲದಲ್ಲಿಯೇ ತನ್ನ ಜೀವನವನ್ನು ಕೊನೆಗೊಳಿಸುವ ರೈತನ ಸಮಸ್ಯೆಗಳು ಅನೇಕವಾಗಿವೆ. ಈ ಸಮಸ್ಯೆಗಳನ್ನು ಬಗೆಹರಿಸಿ ರೈತನಿಗೆ ಪರಿಹಾರ ಒದಗಿದಲು ಸಂಘಟಿತವಾದ ರೈತ ಸಂಘಟನೆ ಇಂದು ಅಗತ್ಯವಾಗಿದೆ. ಭಾರತದ ಸ್ವಾತಂತ್ರ್ಯಕ್ಕೆ ಅಂದು ರಾಷ್ಟ್ರೀಯ ಕಾಂಗ್ರಸ್ಸು, ಸ್ವಾತಂತ್ರ ಯೋಧರು ಹೋರಾಡಿದಂತೆ ಇಂದು ರೈತ ಯೋಧರು ಹೋರಾಡಬೇಕಾಗಿದೆ.

ಬ್ರಿಟಿಷರ ಕಾಲದಲ್ಲಿ ಅವರ ಆಡಳಿತ ಸಂಸ್ಕೃತಿಯನ್ನು ಪಡೆದ ಭಾರತೀಯರಾದ ನಾವು ಅವರಲ್ಲಿಯ ಸತತೋದ್ಯೋಗಿತನದಿಂದ ಸಾಧಕ ಶೀಲ ಗುಣವನ್ನು ಅಳವಡಿಸಿದ್ದರೂ ಬಾಧಕವಾದ ಭೇದ ನೀತಿಯನ್ನು ಮಾತ್ರ ಭಾರತೀಯರಾದ ನಾವು ಅಳವಡಿಸಿಕೊಂಡು ಬಂದಿರುವುದು ಮಹಾ

ಅಪರಾಧವಾಗಿದೆ. ರೈತರ ಸಂಘಟನೆಯಲ್ಲಿ ಒಡಕು ಅನೈಕ್ಯತೆ ಅಸಹಕಾರಗಳು ಇದ್ದರೆ ಸಾಕು ರೈತರ ಬೇಡಿಕೆ ಹಾಗೂ ಅವರ ಸಮಸ್ಯೆಗಳಿಗೆ ಪರಿಹಾರ ಕೊಡುವ ಬಗೆಹರಿಸುವ ಗೋಜಿಗೆ ಸರಕಾರವಾದರೂ ಹೋಗದೆ ರೈತರಲ್ಲಿಯ ಅನೈಕ್ಯತೆಯ ಲಾಭ ಪಡೆದು ರೈತರ ಸಮಸ್ಯೆ ಬೇಡಿಕೆಗಳಿಂದ ಸರಕಾರವು ಪಾರಾಗುತ್ತಾ ಬಂದದ್ದಾಗಿದೆ. ಹೀಗೆ ಕೃಷಿಕರ ಸಮಸ್ಯೆಗಳು ಬಗೆಹರಿಯದೇ ಬೇಡಿಕೆಗಳ ಬಗ್ಗೆ ಪರಿಹಾರ ಸಿಗಲಾರದೇ ರೈತರ ಸಮಸ್ಯೆ ದಿನದಿನಕ್ಕೂ ಗಂಭೀರವಾಗಿ ಉಳಿಯುತ್ತದಲ್ಲದೆ ರೈತ ರೈತರಲ್ಲಿ ಒಂದು ಯಾದವೀ ಕಲಹಕ್ಕೆ ಸಂಘಟನೆಯಲ್ಲಿ ದೌರ್ಬಲ್ಯವಿ ಕಾರಣೀಭೂತ ಆಗುತ್ತಿದೆಯೆಂಬುದೆನ್ನಬಹುದು.

ರೈತನು ಬಿಸಿಲು ಮಳೆ ಚಳಿ ಗಾಳಿಗಳಲ್ಲಿ ತನ್ನ ಶ್ರಮದ ಬೆವರಿನಿಂದ ಉತ್ಪಾದಿಸಿದ ಕೃಷಿ ಹುಟ್ಟುವಳಿಗೆ ಧಾರಣಿಯನ್ನು ನಿರ್ಣಯಿಸುವ ಹಕ್ಕನ್ನು ಭಾರತದಲ್ಲಿ ಮಾತ್ರ ಕಳೆದುಕೊಂಡಿದ್ದಾನೆ. ಖರೀದಿಸುವ ವರ್ತಕರಿಗೆ ಮಾತ್ರ ಧಾರಣಿಯನ್ನು ನಿರ್ಣಯಿಸುವ ಹಕ್ಕು ಭಾರತದಲ್ಲಿದೆ. ಇನ್ನುಳಿದ ಉದ್ದಿಮೆಗಳಲ್ಲಿ ಉತ್ಪಾದಿಸುವವನಿಗೆ ಮಾತ್ರ ತಾನು ತಯಾರಿಸಿದ ಹುಟ್ಟುವಳಿಗಳಿಗೆ ಧಾರಣಿಯನ್ನು ನಿರ್ಣಯಿಸುವ ಹಕ್ಕು ಪ್ರಾಪ್ತವಿದೆ. ರೈತನು ತನ್ನ ಕೃಷಿ ಅಭಿವೃದ್ಧಿಗೆ ಅಗತ್ಯವಿದ್ದ ರಾಸಾಯನಿಕ ಗೊಬ್ಬರ ಔಷಧ ಕಬ್ಬಿಣ ಕಟ್ಟಿಗೆ ಸಿಮೆಂಟು ಇತ್ಯಾದಿಗಳಿಗೆ ತೆತ್ತತಕ್ಕ ಧಾರಣಿಗಳೂ ತುಲನೆ ಮಾಡಿದರೆ ಅವು ಗಗನಕ್ಕೇರಿವೆ. ಹೀಗಾಗಿ ಕೃಷಿ ದಂಧೆಯು ಭಾರತದಲ್ಲಿ ಲೆಕ್ಕಾಚಾರವಿಲ್ಲದೆ ದಂಧೆಯಾಗಿದೆಯೆನ್ನಬಹುದು.

ರೈತನ ಈ ಸಮಸ್ಯೆಗಳ ಪರಿಹಾರಕ್ಕಾಗಿ ಸರಕಾರವು ಎಷ್ಟೇ ಹಣಕಾಸಿನ ನೆರವು ತಾಂತ್ರಿಕ ಸಲಹೆ ಕೊಟ್ಟಾಗ್ಯೂ ರೈತನ ಆರ್ಥಿಕ ಮಟ್ಟ ಸುಧಾರಿಸಿಲ್ಲ. ಈ ಸಮಸ್ಯೆಗಳ ಪರಿಹಾರಕ್ಕಾಗಿ ಹೆಣಗಾಡುತ್ತಿರುವ ರೈತ , ರೈತ ಕೂಲಿಕಾರರ ಸಂಘಟನೆಗಳಲ್ಲಿ ಅನ್ಯೋನ್ಯದ ಅಸಹಕಾರದ ಅನೈಕ್ಯ ಒಡಕು ಭಿನ್ನಮತಿಯ ಮನೋಭಾವನೆಯಿಂದ ಪ್ರಾರಂಭವಾದ ಈ ರೈತ ಸಂಘಟನೆಗಳು ತಾವು ಹೋರಾಟ ಮಾಡುವ ಗೊತ್ತು, ಗುರಿ, ಉದ್ದೇಶ ಸಾಧಿಸಲಾರದವುಗಳಾಗಿವೆ. ಆದರೆ ತಮ್ಮ ತಮ್ಮ ಭದ್ರತೆ ಹಿತಾಸಕ್ತಿಗಾಗಿ ಬಡಿದಾಡುತ್ತಾ ರಾಷ್ಟ್ರದಲ್ಲಿಯ ಮುಗ್ಧ ರೈತರನ್ನು ಯಜ್ಞ ಪಶುಗಳನ್ನಾಗಿ ಮಾಡಲಾಗುತ್ತಿದೆ.

## ಅಭಿಪ್ರಾಯಗಳು:

## ಸಂಯೋಜಕ ಸರ್ವಜ್ಞ

ಸಂಗ್ರಹ: ಬಿ.ಎಂ.ಹೊರಕೇರಿ
ರವಿಕೀರ್ತಿ ಪ್ರಕಾಶನ, ಢಾಣಕಶಿರೂರ
ತಾ.ಬಾದಾಮಿ-ಬಿಜಾಪುರ

ಲೇಖಕರೆ ಹೇಳುವಂತೆ ಈ ಚಿಕ್ಕ ಹೊತ್ತಿಗೆಯು ಸರ್ವಜ್ಞಮೂರ್ತಿಯ "ಚತುಃ ಶತಮಾನ" ಉತ್ಸವ ಕಾಲದಲ್ಲಿ ಪ್ರಕಟಿಸಬೇಕಾಗಿತ್ತು. ಆದರೆ ತಡವಾಗಿ 1978ರಲ್ಲಿ ಪ್ರಕಟಗೊಂಡಿದೆ. ಇರಲಿ, ಸಂಗ್ರಹಕಾರರ ಸಂಗ್ರಹಣೆ ಚರ್ವಿತ ಚರ್ವಣವಾಗಿದೆ ಎಂದು ಅನಿವಾರ್ಯವಾಗಿ ಒಪ್ಪಬೇಕಾದ ಸಂಗತಿ! "ಇದು ನನ್ನ ಚೊಚ್ಚಲ ಕೃತಿ.-ಸಂಶೋಧಕರ ದೃಷ್ಟಿಯಿಂದ ಸಂಗ್ರಹಿಸಿ ಜೋಡಿಸಿ ಬರೆದುದು" ಎನ್ನುವ ಅವರ ಹೇಳಿಕೆ ಸಮರ್ಪಕವಾಗಿದ್ದರೂ ಕೃತಿಯನ್ನು ನೋಡಿದಾಗ ಸಂಗ್ರಹಣೆಯ ಕೆಲಸ ಸುಲಭವಲ್ಲವೆಂಬುದು ಎದ್ದು ಕಾಣುತ್ತದೆ. ಈಗಾಗಲೇ ಸರ್ವಜ್ಞನ ಬಗ್ಗೆ ಅನೇಕ ಕೃತಿಗಳು ಬಂದು ಹೋಗಿವೆ. ಇಲ್ಲಿ ಓದುಗನು ಹೊಸತನ್ನು ಗ್ರಹಿಸಲಾರ. ಸಾಮಾನ್ಯರ ಬಾಯಲ್ಲಿರುವ ಸಾಮಾನ್ಯ ಹೇಳಿಕೆಗಳು ಇಲ್ಲಿ ಅನೇಕ ಕೆಸಲಗಳಲ್ಲಿಯೂ ಈ ಹೊತ್ತಿಗೆಗೆ ಒಂದು ಹೊಸತನ ತಂದು ಸಾಮಾನ್ಯ ಹಳ್ಳಿಗನಿಗೂ ಕೂಡಾ ಓದಿ ಅರ್ಥ ಮಾಡಿಕೊಳ್ಳುವಂತೆ ಪ್ರಯತ್ನಿಸಿದ್ದಾರೆ. ಶಾಲಾ ಮಕ್ಕಳೂ ಕೂಡ ಓದಿ ಸರ್ವಜ್ಞನ ಬಗ್ಗೆ ಅಭಿಮಾನ ತಾಳಬಹುದಾಗಿದೆ. ರೆ.ಉತ್ತಂಗಿಯವರನ್ನು ಸ್ಮರಿಸಿಕೊಂಡು ಲೇಖಕರು ಉತ್ತಂಗಿಯವರ ಹೇಳಿಕೆಯನ್ನೇ ಇತ್ತಿರುವುದು ಒಂದು ರೀತಿಯಿಂದ ಉಚಿತ. ಏನ್ನಾದರೂ ಈ ಕೃತಿ ಸಂಗ್ರಹವೇ ಆಗಿದ್ದು ಸಂಯೋಜಕರ ಕಾರ್ಯ ಸುಲಭಗೊಳಿಸಿದೆ. ಲೇಖಕರು ಅಲ್ಲಲ್ಲಿ ತಮ್ಮದೇ ಆದ ವಿವರಣೆ ಕೊಡುತ್ತ ಹೋಗಿದ್ದಾರೆ. ಓದುಗನು 'ಅಹುದಾದರೆ ಅಹುದೆನ್ನಬಹುದು; ಇಲ್ಲವಾದರೆ ಇಲ್ಲವೆನ್ನಬಹುದು" ಅವನ ಸ್ವಾತಂತ್ರ್ಯ ಅವನಿಗೆ ಇದ್ದೇ ಇದೆ. ನೂರು ಪುಟದ ಈ ಚಿಕ್ಕ ಹೊತ್ತಿಗೆ ಇಪ್ಪತ್ತೆರಡು ಪುಟಗಳ ಭಾರವಾದ ಸಂದೇಶ ಅಭಿಪ್ರಾಯ ಮೊದಲಾದವುಗಳ ಭಾರಹೊತ್ತು ನಿಂತಿದೆ. ಭಾಷೆ ಶೈಲಿಗಳ ಕಡೆಗೆ ಅಷ್ಟು ಗಮನವಿಡದ ಈ ಸಂಗ್ರಹಕರನ್ನು ಕುರಿತು ಗೆಳೆಯ

ಶ್ರೀಬಿ.ಟಿ.ಸಾಸನೂರ) ಅವರ ಹೇಳಿಕೆ ಇಂತಿದೆ. ಇಂದಿನ ಸರ್ಕಾರಗಳು ಹಮ್ಮಿಕೊಳ್ಳುವ ಪಂಚವಾರ್ಷಿಕ ಯೋಜನೆಗಳ ಕಾರ್ಯಕ್ರಮಗಳನ್ನು......... ಸರ್ವಜ್ಞ ವಚನಗಳಲ್ಲಿ ಕಂಡುಕೊಂಡು....... ಮನಂಬುಗುವಂತೆ ನಿರೂಪಿಸಿದ್ದಾರೆ. ಈ ಕಾರ್ಯ ಈ ಹೊತ್ತಿಗೆಯಿಂದಾಗಲು ಸಾಧ್ಯ. ಲೇಖಕರು ಪಟ್ಟ ಶ್ರಮಸಾರ್ಥಕ. ಮುದ್ರಣ ದೋಷಗಳು ಬಹಳ. ಮುದ್ದಾದ ಸರ್ವಜ್ಞನ ಮೂರ್ತಿ ರಕ್ಷಾಪುಟಕ್ಕೆ ಅಂದ ತಂದಿದೆ.

**ಬಿ.ಆರ್.ವಾಡಪ್ಪಿ** (ಸಂಯುಕ್ತ ಕರ್ನಾಟಕ, ಸಾಪ್ತಾಹಿಕ ಸೌರಭ, 22.06.1980)

# ಶ್ರೀ ಬಿ.ಎಂ. ಹೊರಕೇರಿಯವರ ಪತ್ರಿಕಾ ಲೇಖನ

## ಸುಸಂಬದ್ಧ ರೈತ ಸಂಘಟನೆ ಅವಶ್ಯ

ರಾಷ್ಟ್ರಾದ್ಯಾಂತ ಸಂಘಟನೆಯಿಲ್ಲದ ಅಸಮರ್ಥ ರೈತ ಕೂಲಿಕಾರರ ಆರ್ಥಿಕ ಪ್ರಗತಿ ಅವರ ಜೀವನದ ಅಂತಸ್ತು ಎತ್ತರಿಸುವ ಉದ್ದೇಶ ಗೊತ್ತು ಗುರಿಗಳನ್ನಿಟ್ಟು ರೈತ ಕೂಲಿಕಾರರ ಉದ್ಧಾರ ಮಾಡುವುದಕ್ಕಾಗಿ ರೈತ ಹಾಗೂ ರೈತಕೂಲಿಕಾರರ ಸಂಘ ಸಂಸ್ಥೆಗಳನ್ನು ಅನೇಕ ರೀತಿಯಾಗಿ ಸಂಘಟಿಸಿ ರಾಜ್ಯಾದ್ಯಾಂತ ಹೋರಾಟ ಮಾಡುತ್ತಾ ಬಂದಿರುವ ಅನೇಕ ರೈತ ಮುಂದಾಳುಗಳ ನಾಯಕರುಗಳ ಸಾಹಸಯುತ ಆಸ್ಥೆ, ತ್ಯಾಗ, ಶ್ರಮಗಳಿಗಾಗಿ ರಾಷ್ಟ್ರದ ರೈತ ಕೂಲಿಕಾರರೆಲ್ಲರೂ ಇವರುಗಳಿಗೆ ಕೃತಜ್ಞತೆಗಳನ್ನು ಎಷ್ಟು ಸಲ್ಲಿಸಿದರೂ ಕಡಿಮೆಯೇ.

ಆದರೆ ಈ ಸಂಘಟನೆಯಲ್ಲಿ ಸರಿಯಾದ ಹೊಂದಾಣಿಕೆ ಇಲ್ಲದೇ ಅಸಹಕಾರ ಭಿನ್ನಾಭಿಪ್ರಾಯ ಇವೆಲ್ಲವುಗಳೂ ತಲೆದೋರಿ ಅನೈಕ್ಯ ಉಂಟಾಗಿ ಸಂಘಟನೆಗಳು ಒಡೆದು ತುಂಡಾಗಿ ಭಿನ್ನಮತಿಯರ ಗುಂಪುಗಳು ಸಿಡಿದು ಸಮಾಂತರ ಸಂಘಟನೆಯುನ್ನು ಕಟ್ಟುವುದಕ್ಕಾಗಿ ರಾಷ್ಟ್ರ ರಾಜ್ಯಗಳಲ್ಲೇ ಸಾಧಿಸುತ್ತಿರುವುದಾಗಲೀ ಈ ಸಂಘಟನೆಗಳ ಮೂಲಕವೇ ವೈಯಕ್ತಿಕ ಗುಂಪಿನ ಹಿತಾಸಕ್ತಿ ಪ್ರತಿಷ್ಠೆಗೋಸುಗ ಹೆಣಗಾಡುತ್ತಿರುವುದಾಗಲಿ ಕಂಡು ಬಂದಿದೆ. ಹೀಗೆ ಸಾಧಿಸುತ್ತಿರುವ ಹಾಗೂ ಹೆಣಗಾಡುತ್ತಿರುವ ಸಂಘಗಳಿಂದ ರೈತ,

ರೈತಕೂಲಿಕಾರರ ಉತ್ಕರ್ಷವಾಗದೇ ಅವರ ಅವನತಿಗೆ ಕಾರಣವೆಂದು ಒತ್ತಿ ಹೇಳಬಹುದು. ಸಂಘಟನೆಯ ಪದಾಧಿಕಾರಿಗಳಾಗಲಿ ಸಿಡಿದು ಬಂದಿರುವ ರೈತ ನಾಯಕರಾಗಲಿ ಯಾರೂ ಅನ್ಯೋನ್ಯವಾಗಿ ಹೊಂದಾಣಿಕೆ ಮಾಡುವ ಹಾಗೂ ಸಾಧನಗೊಳಿಸುವ ಗೋಜಿಗೆ ಹೋಗದೇ ಪ್ರತಿಯೊಂದು ಗುಂಪಿನವರು ತಮ್ಮ ತಮ್ಮ ಒಣ ಪ್ರತಿಷ್ಠೆ, ಹೇವ, ಪಂಥ ಪಕ್ಷಗಳಾಗಿ ತಾವು ಹಿಡಿದ ಹಟವನ್ನೇ ಸಾಧಿಸುತ್ತಾ ಮುಂದುವರೆದಿದ್ದಾರೆ.

ಸರಕಾರಿ ಆಡಳಿತೆಯ ಬಿಕ್ಕಟ್ಟು ಇಕ್ಕಟ್ಟುಗಳೊಡನೆ ಹೋರಾಡಲು ಎದುರಿಸಲು ಪ್ರತಿಭಟಿಸಲು ರಾಷ್ಟ್ರಾದ್ಯಂತವಾಗಿ ಒಕ್ಕೊರಲಿನಿಂದ ಘೋಷಿಸುವ ಆಸ್ಥೆಯುಳ್ಳ ನಿಸ್ವಾರ್ಥ ಪ್ರಾಮಾಣಿಕ ತ್ಯಾಗ, ಸಹಕಾರ ಐಕ್ಯತೆಯ ಮನೋಭಾವನೆಯನ್ನು ಒಂದೇ ಒಂದಾದ ಸಮರ್ಥ ಸದ್ಭಾವನೆಯ ಸಂಘಟನೆ ಇಂದು ರಾಷ್ಟ್ರದಲ್ಲಿ ಅಗತ್ಯವಿದೆ. ರಾಷ್ಟ್ರದ ಮಾನಧನವಾದ ಹಾಗೂ ಸತ್ವಶಾಲಿಯಾದ ಕೃಷಿಕ(ರೈತ) ವರ್ಗವು ನಷ್ಟವಾದರೆ ಅದು ನಾಡಿಗೆ ಎಂದಿಗೂ ತುಂಬಿಬರಲಾಗದ ಹಾನಿಯಾಗುವುದು. ಯಾವುದೇ ರಾಷ್ಟ್ರದ ಸಂಪತ್ತನ್ನು ಆ ರಾಷ್ಟ್ರದ ರೈತರ ಸಂಪತ್ತಿನ ಅಳತೆಗೋಲಿನಿಂದಲೇ ಅಳೆಯಬಹುದಲ್ಲವೇ. ಬೇರೊಂದು ರೀತಿಯಿಂದ ಅಲ್ಲ. ಅದು ಕಾರಣ ರೈತನ ಆರ್ಥಿಕ ಸ್ಥಿತಿ ಸುಧಾರಿಸಲು ಅಗತ್ಯವಿದ್ದ ಬೇಡಿಕೆಗಳನ್ನು ಸರಕಾರವೂ ಮನ್ನಿಸಿದಾಗಲೇ ಹಾಗೂ ರೈತನ ಸಮಸ್ಯೆಗಳನ್ನು ಪರಿಹರಿಸಿದಾಗಲೇ ರಾಷ್ಟ್ರದ ಆರ್ಥಿಕ ಪ್ರಗತಿ ಸುಧಾರಿಸಲು ಸಾಧ್ಯ.

ಸಾಲದಲ್ಲಿ ಹುಟ್ಟಿ ಸಾಲದಲ್ಲಿ ಬೆಳೆದು ಸಾಲದಲ್ಲಿಯೇ ತನ್ನ ಜೀವನವನ್ನು ಕೊನೆಗೊಳಿಸುವ ರೈತನ ಸಮಸ್ಯೆಗಳು ಅನೇಕವಾಗಿವೆ. ಈ ಸಮಸ್ಯೆಗಳನ್ನು ಬಗೆಹರಿಸಿ ರೈತನಿಗೆ ಪರಿಹಾರ ಒದಗಿದಲು ಸಂಘಟಿತವಾದ ರೈತ ಸಂಘಟನೆ ಇಂದು ಅಗತ್ಯವಾಗಿದೆ. ಭಾರತದ ಸ್ವಾತಂತ್ರ್ಯಕ್ಕೆ ಅಂದು ರಾಷ್ಟ್ರೀಯ ಕಾಂಗ್ರಸ್ಸು, ಸ್ವಾತಂತ್ರ ಯೋಧರು ಹೋರಾಡಿದಂತೆ ಇಂದು ರೈತ ಯೋಧರು ಹೋರಾಡಬೇಕಾಗಿದೆ.

ಬ್ರಿಟಿಷರ ಕಾಲದಲ್ಲಿ ಅವರ ಆಡಳಿತ ಸಂಸ್ಕೃತಿಯನ್ನು ಪಡೆದ ಭಾರತೀಯರಾದ ನಾವು ಅವರಲ್ಲಿಯ ಸತತೋದ್ಯೋಗಿತನದಿಂದ ಸಾಧಕ ಶೀಲ ಗುಣವನ್ನು ಅಳವಡಿಸಿದ್ದರೂ ಬಾಧಕವಾದ ಭೇದ ನೀತಿಯನ್ನು ಮಾತ್ರ ಭಾರತೀಯರಾದ ನಾವು ಅಳವಡಿಸಿಕೊಂಡು ಬಂದಿರುವುದು ಮಹಾ

ಅಪರಾಧವಾಗಿದೆ. ರೈತರ ಸಂಘಟನೆಯಲ್ಲಿ ಒಡಕು ಅನೈಕ್ಯತೆ ಅಸಹಕಾರಗಳು ಇದ್ದರೆ ಸಾಕು ರೈತರ ಬೇಡಿಕೆ ಹಾಗೂ ಅವರ ಸಮಸ್ಯೆಗಳಿಗೆ ಪರಿಹಾರ ಕೊಡುವ ಬಗೆಹರಿಸುವ ಗೋಜಿಗೆ ಸರಕಾರವಾದರೂ ಹೋಗದೆ ರೈತರಲ್ಲಿಯ ಅನೈಕ್ಯತೆಯ ಲಾಭ ಪಡೆದು ರೈತರ ಸಮಸ್ಯೆ ಬೇಡಿಕೆಗಳಿಂದ ಸರಕಾರವು ಪಾರಾಗುತ್ತಾ ಬಂದದ್ದಾಗಿದೆ. ಹೀಗೆ ಕೃಷಿಕರ ಸಮಸ್ಯೆಗಳು ಬಗೆಹರಿಯದೇ ಬೇಡಿಕೆಗಳ ಬಗ್ಗೆ ಪರಿಹಾರ ಸಿಗಲಾರದೇ ರೈತರ ಸಮಸ್ಯೆ ದಿನದಿನಕ್ಕೂ ಗಂಭೀರವಾಗಿ ಉಳಿಯುತ್ತದಲ್ಲದೆ ರೈತ ರೈತರಲ್ಲಿ ಒಂದು ಯಾದವೀ ಕಲಹಕ್ಕೆ ಸಂಘಟನೆಯಲ್ಲಿ ದೌರ್ಬಲ್ಯವಿ ಕಾರಣೀಭೂತ ಆಗುತ್ತಿದೆಯೆಂಬುದೆನ್ನಬಹುದು.

ರೈತನು ಬಿಸಿಲು ಮಳೆ ಚಳಿ ಗಾಳಿಗಳಲ್ಲಿ ತನ್ನ ಶ್ರಮದ ಬೆವರಿನಿಂದ ಉತ್ಪಾದಿಸಿದ ಕೃಷಿ ಹುಟ್ಟುವಳಿಗೆ ಧಾರಣಿಯನ್ನು ನಿರ್ಣಯಿಸುವ ಹಕ್ಕನ್ನು ಭಾರತದಲ್ಲಿ ಮಾತ್ರ ಕಳೆದುಕೊಂಡಿದ್ದಾನೆ. ಖರೀದಿಸುವ ವರ್ತಕರಿಗೆ ಮಾತ್ರ ಧಾರಣಿಯನ್ನು ನಿರ್ಣಯಿಸುವ ಹಕ್ಕು ಭಾರತದಲ್ಲಿದೆ. ಇನ್ನುಳಿದ ಉದ್ದಿಮೆಗಳಲ್ಲಿ ಉತ್ಪಾದಿಸುವವನಿಗೆ ಮಾತ್ರ ತಾನು ತಯಾರಿಸಿದ ಹುಟ್ಟುವಳಿಗಳಿಗೆ ಧಾರಣಿಯನ್ನು ನಿರ್ಣಯಿಸುವ ಹಕ್ಕು ಪ್ರಾಪ್ತವಿದೆ. ರೈತನು ತನ್ನ ಕೃಷಿ ಅಭಿವೃದ್ಧಿಗೆ ಅಗತ್ಯವಿದ್ದ ರಾಸಾಯನಿಕ ಗೊಬ್ಬರ ಔಷಧ ಕಬ್ಬಿಣ ಕಟ್ಟಿಗೆ ಸಿಮೆಂಟು ಇತ್ಯಾದಿಗಳಿಗೆ ತೆತ್ತತಕ್ಕ ಧಾರಣಿಗಳೂ ತುಲನೆ ಮಾಡಿದರೆ ಅವು ಗಗನಕ್ಕೇರಿವೆ. ಹೀಗಾಗಿ ಕೃಷಿ ದಂಧೆಯು ಭಾರತದಲ್ಲಿ ಲೆಕ್ಕಾಚಾರವಿಲ್ಲದೆ ದಂಧೆಯಾಗಿದೆಯೆನ್ನಬಹುದು.

ರೈತನ ಈ ಸಮಸ್ಯೆಗಳ ಪರಿಹಾರಕ್ಕಾಗಿ ಸರಕಾರವು ಎಷ್ಟೇ ಹಣಕಾಸಿನ ನೆರವು ತಾಂತ್ರಿಕ ಸಲಹೆ ಕೊಟ್ಟಾಗ್ಯೂ ರೈತನ ಆರ್ಥಿಕ ಮಟ್ಟ ಸುಧಾರಿಸಿಲ್ಲ. ಈ ಸಮಸ್ಯೆಗಳ ಪರಿಹಾರಕ್ಕಾಗಿ ಹೆಣಗಾಡುತ್ತಿರುವ ರೈತ , ರೈತ ಕೂಲಿಕಾರರ ಸಂಘಟನೆಗಳಲ್ಲಿ ಅನ್ಯೋನ್ಯದ ಅಸಹಕಾರದ ಅನೈಕ್ಯ ಒಡಕು ಭಿನ್ನಮತಿಯ ಮನೋಭಾವನೆಯಿಂದ ಪ್ರಾರಂಭವಾದ ಈ ರೈತ ಸಂಘಟನೆಗಳು ತಾವು ಹೋರಾಟ ಮಾಡುವ ಗೊತ್ತು, ಗುರಿ, ಉದ್ದೇಶ ಸಾಧಿಸಲಾರದವುಗಳಾಗಿವೆ. ಆದರೆ ತಮ್ಮ ತಮ್ಮ ಭದ್ರತೆ ಹಿತಾಸಕ್ತಿಗಾಗಿ ಬಡಿದಾಡುತ್ತಾ ರಾಷ್ಟ್ರದಲ್ಲಿಯ ಮುಗ್ಧ ರೈತರನ್ನು ಯಜ್ಞ ಪಶುಗಳನ್ನಾಗಿ ಮಾಡಲಾಗುತ್ತಿದೆ.

ಈಗಲಾದರೂ ರೈತಾಭಿಮಾನಿಗಳು ಜಾಗೃತರಾಗಿ ಒಂದು ಕ್ರೀಡಾಮನೋಭಾವನೆಯಿಂದ ಹಾಗೂ ಸದ್ಭಾವನೆಯಿಂದ ಬೇರೆ ಬೇರೆ ಪಕ್ಷದ ಗುಂಪಿನ ರೈತಸಂಘಟನೆಯು ಕೂಡಿ ಸಮಾಲೋಚಿಸಿ ವಿಧಾಯಕ ರಚನಾತ್ಮಕ ವಿಚಾರಗಳೊಂದಿಗೆ ತಮ್ಮ ತಮ್ಮಲ್ಲಿರುವ ತಪ್ಪು ತಿಳುವಳಿಕೆಗಳನ್ನು , ಲೋಪದೋಷಗಳನ್ನು ನಿವಾರಿಸಿಕೊಂಡು ಸುಸಂಬದ್ಧ ರೈತ ಸಂಘಟನೆಯನ್ನು ಗ್ರಾಮ ಮಟ್ಟದಿಂದ ರಾಷ್ಟ್ರ ಮಟ್ಟದ ವರೆಗೆ ಪುನಃರಚಿಸಬೇಕು. ಹೀಗೆ ಸಂಘಟಿತ ಸಂಸ್ಥೆಗೆ ಹೆಚ್ಚಿನ ಸಾಮರ್ಥ್ಯ ದಕ್ಷತೆ ಧೈರ್ಯ ಬರುತ್ತದೆ. ಇದರಿಂದ ಯಾವುದೇ ಸಮಸ್ಯೆಯನ್ನು ಪರಿಹರಿಸಲು ಸಾಧ್ಯ.

**ಸಂಯುಕ್ತ ಕರ್ನಾಟಕ,** ದಿ:3.5.1984

## ಕನ್ನಡ ನುಡಿಯ ಶಬ್ದಗಳ ಸಂಪತ್ತು

ಮುಂದೆ ವಿವರಿಸಿದ ಒಂದೊಂದೇ ಕನ್ನಡ ಶಬ್ದಗಳನ್ನು ಪರಿಶೀಲಿಸುತ್ತಾ ಹೋದಂತೆ ಅವುಗಳ ಔಚಿತ್ಯ ತುಂಬಾ ಮಾರ್ಮಿಕವಾಗಿರುವುದು ತೋರುತ್ತಲಿದೆ.

ತಂದೆ(ಪಿತೃ)–ಸಂಸ್ಕೃತದ ಪಿತೃ ಶಬ್ದವು ಕನ್ನಡದಲ್ಲಿ ತಂದೆ ಶಬ್ದವಾಗಿದೆ. ತಾನು ಹಡೆದ ಮಕ್ಕಳನ್ನು ಪೊಡವಿಗೆ ತಂದಿರುವ ಅಭಿಮಾನದಿಂದ ನಾ, ತಂದೆ ಎಂದು ಕೊಳ್ಳಲಾಗಿದೆ.

ತಾಯಿ(ಮಾತೃ)–ಸಂಸ್ಕೃತದ ಮಾತೃ ಶಬ್ದವು ಕ್ನನಡದಲ್ಲಿ ತಾಯಿ ಶಬ್ದವಾಗಿದೆ. ತಾಯಿ ಕಾಪಾಡುವವಳು. ಮಕ್ಕಳಿಗಾಗಲಿ, ಸಂಕಷ್ಟದಲ್ಲಿರುವ ಯಾರೇ ಇರಲಿ ರಕ್ಷಣೆಗೈದು ತಾಮ್ರ ಬೆಳ್ಳಿ ಬಂಗಾರದ "ತಾಯತ್ತ" ಮಾಡಿಸಿ ಮಂತ್ರ ಪ್ರಸಾದಗಳಿಂದ ಶುದ್ಧೀಕರಿಸಿ ದೇಹದಲ್ಲಿ ರಕ್ಷಣೆಗಾಗಿ ಧರಿಸುವರಲ್ಲವೇ? ರಕ್ಷಣೆ ಮಾಡುವ ವಸ್ತು "ತಾಯಿತ" ಹೀಗೆ ತಾಯಿ ಶಬ್ದ ಹುಟ್ಟಿತು.

ಹಡೆ–ಪಡೆ–ದಂಪತಿಗಳು ಮಕ್ಕಳನ್ನು ಹೊಂದಿದಾಗ ತಾಯಿಯಾದವಳು ಹಡೆದವಳೆಂದು ತಂದೆಯಾದವನು ಪಡೆದವನೆಂದು ಬಳಸುವರು.

ನೀರು–ನೀ, ಇರು. ಮಾನವ ಹಾಗೂ ಜೀವಿಸುವ ಪ್ರಾಣಿ ಮಾತ್ರವಲ್ಲ ಆಹಾರವಿಲ್ಲದೆ ಕೆಲಕಾಲ ಜೀವಿಸಿರಬಹುದು. ನೀರಿಲ್ಲದೇ ಜೀವಿಸಿರಲಾರ; ಅದಕ್ಕಾಗಿ ನೀರು ಎಂಬುದಾಗಿ ಕರೆದಿದ್ದಾಗಿದೆ.

ಮುಗಿಲು–ವಿಸ್ತೃತ ವ್ಯಾಪಕವಾದ–ಆಕಾಶದ ಕೊನೆಯು ಮುಗಿಯಲಾರದಂತಿದ್ದು. ಅದು ಮುಗಿಯಲಿಲ್ಲ ಶಬ್ದವು ವಿಕೃತಗೊಂಡು ಮುಗಿಲು ಅಂತಾ ಕರೆಯುತ್ತ ಬಂದಿದೆ.

ತೆರವು(ಕನ್ಯಾಶುಲ್ಕ)–ಅನ್ಯರ ಮನೆಯ ಕನ್ಯೆಯನ್ನು ತಮ್ಮ ಮನೆಗೆ–ಮಕ್ಕಳಿಗೆ ತಕ್ಕೊಂಡು ಶರೀರ ಸಂಬಂಧವನ್ನುಂಟುಮಾಡುವ ಸಂದರ್ಭದಲ್ಲಿ ಕನ್ಯೆಗೆ ನಿರ್ದಿಷ್ಟ ನಿಧಿಯನ್ನು ತೆರವು ರೂಪದಲ್ಲಿ ಕನ್ಯಾದ ಮಾತೃ–ಪಿತೃಗಳಿಗೆ ಕೊಡುವ ಸಂಪ್ರದಾಯವು ಗ್ರಾಮಾಂತರ ಅನಾಗರಿಕತೆ–ಸಮಾಜದಲ್ಲಿ ಪರಂಪರಾಗತವಾಗಿ ಬಂದಿದೆ. ಕನ್ಯಾ ಲಗ್ನವಾದನಂತರ ತನ್ನ ತವರು ಮನೆಯನ್ನು ತೆರವು ಮಾಡುವುದರಿಂದ ಪರಿಹಾರಕ್ಕಾಗಿ ಕೊಡುವ ನಿಧಿಗೆ ತೆರವು ಅಂತಾ ಕರೆದಿದ್ದಾಗಿದೆ.

ತಾಳು–ಇನ್ನು ಕೃಷಿಕ ತಮ್ಮ ಒಕ್ಕಲುತನ ಕೂರಿಗೆ, ಕುಂಟೆ, ಕೊರಡುಗಳಲ್ಲಿಯ ಉಪಕರಣಗಳಿಗಿಟ್ಟ ಹೆಸರುಗಳು ತುಂಬಾ ಉಚಿತವಾಗಿವೆ. ಕೂರಿಗೆ ಕುಂಟೆಗಳಿಗೆ ತಾಳುಗಳ ಬಿಡಿಭಾಗಗಳಿವೆ. ಈ ತಾಳುಗಳು ಭೂಮಿಯಲ್ಲಿ ಸೇರಿ ಭಾರವಾದದಿಂಡು, ಮೇಲೇರಿದ ಕೃಷಿಕನ ಭಾರವನು ಸಹಿಸುವ(ತಾಳುವ)ದರಿಂದ ಇವುಗಳಿಗೆ ತಾಳುಗಳೆಂದು ಕರೆದಿದ್ದಾಗಿದೆ.

ಮೇಳಿ–ಕೂರಿಗೆ ಕುಂಟೆಗಳಿಂದ ಸಾಗು ಮಾಡುತ್ತಿರುವಾಗ ಸಾಗುವಳಿ ಭಾಗದಲ್ಲಿ ಒಳಸೇರದಂತೆಯೂ, ಹಾಗೂ ಸಾಗುವಳಿಯಾಗದ ಭಾಗದಲ್ಲಿ ಹೊರಬಾರದಂತೆಯೂ, ಕೂರಿಗೆ ಕುಂಟೆಗಳಿಂದ ಮಧ್ಯದ ಮೇಳಿಯಿಂದ ಸರಿಪಡಿಸುವ (ಮೇಳೈಸುವ)ದರಿಂದ ಅದಕ್ಕೆ ಮೇಳಿ ಎಂದು ಕರೆದಿದ್ದಾಗಿದೆ.

ಈಸು–ಕೂರಿಗೆ ಕುಂಟೆಗಳನ್ನು ಎತ್ತುಗಳಿಂದ ನೋಗಕ್ಕೆ ಜೋಡಿಸಿ, ಎಳೆಯುವ ಈ ಕ್ರಿಯೆಯು ಗಳೆಹೂಡಿದ ಎತ್ತು ಕೂರಿಗೆ ಕುಂಟೆ ಸಾಧನದ ಗುಂಪು, ಭೂಪ್ರಾಪ್ತದ ಸಾಗರದಲ್ಲಿ ಈಸಿದಂತೆ ತೋರುತ್ತದೆ. ಅದಕ್ಕಾಗಿ ಕೂರಿಗೆ ಕುಂಟೆಗಳ ಮುಂದಿನ ಭಾಗಕ್ಕೆ ಈಸು ಎಂದು ಕರೆದಿದ್ದಾಗಿದೆ.

ಹೀಗೆ ಶೋಧಿಸುತ್ತ ಹೋದಂತೆ ಕನ್ನಡ ನುಡಿಯ ಶಬ್ದಗಳ ರೂಪಣೆ ಸಂಪತ್ತು ಉಳಿದ ಭಾಷೆಯ ಸಂಪತ್ತಿಗಿಂತಲೂ, ಮಿಗಿಲಾಗಿರುವದೆಂದು ಅನ್ನಬಹುದು.

ಭಾಷೆ ತಜ್ಞರು, ಸಂಶೋಧಕರು ಈ ದಿಸೆಯಲ್ಲಿ ಸಂಶೋಧಿಸಿ ಹುಡುಕಿ ಹುಟ್ಟಿಸಿ, ಕಾರ್ಯಮಾಡಿ ಕನ್ನಡ ನುಡಿಯು ವಿಕೃತವಾಗದೆ ಅಭಿವೃದ್ಧಿ ಹೊಂದಲು ಯತ್ನಿಸಲಿ.

**ಸಂಯುಕ್ತ ಕರ್ನಾಟಕ** (ದಿ:12.12.1992)

## ಬಿ.ಎಂ.ಹೊರಕೇರಿಯವರ ನನಸಾಗದೆ ಉಳಿದ ಕನಸುಗಳು

1. ಮಹಾದಾಯಿ-ಮಲಪ್ರಭಾ ಜೋಡಣೆ, ಇದು ಶ್ರೀ ಬಿ.ಎಂ.ಹೊರಕೇರಿಯವರ ಕಲ್ಪನೆಯ ಕೂಸು. ಈ ಯೋಜನೆಯ ಬಗೆಗೆ ರಾಜ್ಯ ಸರ್ಕಾರ ಆಸಕ್ತಿ ವಹಿಸಿ ಯೋಜನೆಯನ್ನು ಪೂರ್ಣಗೊಳಿಸಬೇಕಾಗಿದೆ. ಬಾಗಲಕೋಟೆ, ಬಿಜಾಪುರ ಜಿಲ್ಲೆಯ ಜನಪ್ರತಿನಿಧಿಗಳು ಹಾಗೂ ಸಚಿವರು ರಾಜಕೀಯ ಇಚ್ಛಾಶಕ್ತಿಯಿಂದ ಈ ಕೆಸಲ ಮಾಡಬೇಕಾದ ಅಗತ್ಯ ಎಂದಿಗಿಂತಲೂ ಇಂದು ತುರ್ತಾಗಿದೆ.

2. ಶಿವಯೋಗ ಮಂದಿರದ ಬಳಿ ಆರು ಮೆಗಾವ್ಯಾಟ್ ಕಿರು ಜಲವಿದ್ಯುತ್ ಯೋಜನೆಯನ್ನು ರೂಪಿಸಿದ್ದ ಶ್ರೀ ಬಿ.ಎಂ.ಹೊರಕೇರಿಯವರು ಅದರ ಸಫಲತೆಗೆ ಕೇಂದ್ರ-ರಾಜ್ಯ ಸರಕಾರದ ಜೊತೆ ಪತ್ರ ವ್ಯವಹಾರ ಮಾಡಿ ರೈತರ ಸಹಕಾರಿ ಸಂಘದ ಮೂಲಕ ಹಣ ಕ್ರೊಢಿಕರಿಸಿ ಯೋಜನೆಗೆ ಚಾಲನೆ ಒದಗಿಸಿದ್ದರು. ಕರ್ನಾಟಕ ಸರ್ಕಾರ ಈ ದಿಸೆಯಲ್ಲಿ ಆಸಕ್ತಿಯಿಂದ ಯೋಜನೆಯನ್ನು ಕೈಗೆತ್ತಿಕೊಳ್ಳಬೇಕಾಗಿದೆ.

3. ಕೆಂಪು ಮಣ್ಣಿನ ಕೃಷಿ ಸಂಶೋಧನಾ ಕೇಂದ್ರವನ್ನು ಬಾದಾಮಿ ತಾಲ್ಲೂಕಿನಲ್ಲಿ ಸ್ಥಾಪಿಸಿ ಶೇಂಗಾ ಬೆಳೆ ಕುರಿತು ಸಂಶೋಧನೆ ಕೈಕೊಳ್ಳಬೇಕು ಎಂಬುದು ಅವರ ಆಶಯವಾಗಿತ್ತು. ತಾಲ್ಲೂಕಿನಲ್ಲಿ ಶೇಂಗಾ ಬೆಳೆಯ ಕೃಷಿ ಕುಂಠಿತಗೊಂಡಿದ್ದು ಅದರ ಪುನಶ್ಚೇತನದ ಅಗತ್ಯವಿದೆ. ಬಾದಾಮಿ ತಾಲ್ಲೂಕಿನಲ್ಲಿ ಕೃಷಿ ವಿಜ್ಞಾನ ಕೇಂದ್ರವನ್ನು ಕೇಂದ್ರ ಸರ್ಕಾರ ಸ್ಥಾಪಿಸಬೇಕೆಂಬ ಬಯಕೆ ಹೊಂದಿದ ಶ್ರೀ ಹೊರಕೇರಿಯವರು ಸಾಕಷ್ಟು ಶ್ರಮಿಸಿದರು. ಆದರೆ ಅವರ ಕನಸು ನನಸಾಗಲಿಲ್ಲ. ಕೇಂದ್ರ ಸರ್ಕಾರದ ಮೇಲೆ ಒತ್ತಡ ತಂದು ರಾಜ್ಯ ಸರ್ಕಾರ ಈ ಕೆಲಸ ಮಾಡಬೇಕಾಗಿದೆ.

ಹೀಗೆ ಹಲವು ಹತ್ತಾರು ಯೋಜನೆಗಳನ್ನು ಮನಸ್ಸಿನಲ್ಲಿ ತುಂಬಿಕೊಂಡು ಶ್ರಮಿಸಿದ ಶ್ರೀ ಹೊರಕೇರಿಯವರ ಕನಸುಗಳು ನನಸಾಗಬೇಕೆಂಬುದು ಸಮಾಜದ ಹೆಬ್ಬಯಕೆ.




ನಬಾರ್ಡ್ ಬ್ಯಾಂಕ್ ವಿಚಾರ ಸಂಕಿರಣದಲ್ಲಿ ಬಿ.ಎಂ. ಹೊರಕೇರಿ ಅವರು



ಬಿ.ಎಂ. ಹೊರಕೇರಿ ಅವರ ಧರ್ಮಪತ್ನಿ ಶ್ರೀಮತಿ ಶಿವಬಸಮ್ಮ



ರಾಷ್ಟ್ರೀಯ ವಿಚಾರ ಸಂಕಿರಣವೊಂದರಲ್ಲಿ ಬಿ.ಎಂ. ಹೊರಕೇರಿ



ಕರ್ನಾಟಕದ ರಾಜ್ಯಪಾಲರಾಗಿದ್ದ ಶ್ರೀಮತಿ ವಿ.ಎಸ್. ರಮಾದೇವಿ
ಅವರೊಂದಿಗೆ ಬಿ.ಎಂ. ಹೊರಕೇರಿ



ಅಂತರಾಷ್ಟ್ರೀಯ ವಿಚಾರ ಗೋಷ್ಠಿಯೊಂದರಲ್ಲಿ ಸಾಮಾನ್ಯ ರೈತನಾಗಿ ಭಾಗವಹಿಸಿದ
ಬಿ.ಎಂ. ಹೊರಕೇರಿ




ನವದೆಹಲಿಯ ಫ್ರೆ-ಡಿಸ್ಸಿಪ್ ಆಫ್ ಫ್ಲೋರಂ ವತಿಯಿಂದ
ರಾಷ್ಟ್ರೀಯ ಪುನರುತ್ಥಾನ ಪ್ರಶಸ್ತಿ ಪಡೆದ ಸಂದರ್ಭ



ಕರ್ನಾಟಕ ರಾಜ್ಯ ಸಾರ್ವಜನಿಕ ಸೇವಾ ಪ್ರಶಸ್ತಿಯನ್ನು ಆಗಿನ ಮುಖ್ಯಮಂತ್ರಿ ಎಸ್.ಆರ್. ಕಂಠಿ ಅವರಿಂದ ಸ್ವೀಕರಿಸುತ್ತಿರುವ ಬಿ.ಎಂ. ಹೊರಕೇರಿ ಅವರು



ಗ್ರಾಮೀಣ ಕಾರ್ಯಕ್ರಮವೊಂದರಲ್ಲಿ ಸಚಿವ–ಕೆ.ಟಿ. ರಾಠೋಡ, ಶಾಸಕ–ಆರ್.ಟಿ. ದೇಸಾಯಿ, ಬಿ.ಎಂ. ಹೊರಕೇರಿ



ಕರ್ನಾಟಕ ರಾಜ್ಯ ಸಾರ್ವಜನಿಕ ಸೇವಾ ಪ್ರಶಸ್ತಿ ಪಡೆದ ಗಣ್ಯರು
ರುದ್ರಮೂರ್ತಿ, ಡಾ॥ ಬಿ.ಎಸ್. ಜೀರಗೆ, ಡಾ॥ ರಾ.ಯ. ಧಾರವಾಡಕರ್,
ಎಸ್.ಆರ್. ಕಂಠಿ, ಡಾ॥ ಎಂ.ಎ. ಪೈ ಹಾಗೂ ಬಿ.ಎಂ. ಹೊರಕೇರಿ



ನದಿ ನೀರಿನ ಕೊರೆತಕ್ಕೆ ಕಲ್ಲೊಡ್ಡು ಹಾಕಿಸುವ ಬಂಧುಗಳೊಂದಿಗೆ
ಬಿ.ಎಂ. ಹೊರಕೇರಿ



ಅಂತರಾಷ್ಟ್ರೀಯ ವಿಚಾರಗೋಷ್ಠಿಯೊಂದರಲ್ಲಿ ಬಿ.ಎಂ. ಹೊರಕೇರಿ



ಬಿಜಾಪೂರ ಜಿಲ್ಲೆಯಲ್ಲಿ ಕೃಷಿ ಅಭಿವೃದ್ಧಿ ಸಾಧನೆಗಾಗಿ
ಇಂದಿರಾಗಾಂಧಿ ಅವರಿಂದ ಬಹುಮಾನ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ॥ ಸಂಧ್ಯಾರೆಡ್ಡಿ | 20.00 |
| 15. | ಬಿ.ಪಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎಸ್. ಚಂದ್ರಯ್ಯ | 20.00 |
| 17. | ಬಿ. ರಾಜಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ॥ ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ॥ ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ॥ ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರ ದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಘಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ರೇಷ್ಮಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ॥ ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜಿ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ॥ ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30.00 |

| | | | |
|---|---|---|---|
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30.00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20.00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20.00 |
| 41. | ಎಂ.ಎ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15.00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ|| ಎಚ್. ನರಸಿಂಹಯ್ಯ | ಪ್ರೊ. ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 20–00 |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಿಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15.00 |



ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು-೫೬೦ ೦೫೮